ನವಸಾಕ್ಷರ ಪುಸ್ತಕ ಮಾಲೆ ೫೭

# ನಾವು ಮತ್ತು ಸರಕಾರ

ಡಾ|| ಎಚ್.ಎಂ. ಮರುಳಸಿದ್ಧಯ್ಯ








ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ

ಹಾ. ಮಾ. ನಾಯಕ
ಎಚ್. ನರಸಿಂಹಯ್ಯ
ಜಿ. ನಾರಾಯಣ
ಎಲ್. ಎಸ್. ಶೇಷಗಿರಿರಾವ್
ಶಾಂತರಸ
ಕೆ. ವಿ. ಸುಬ್ಬಣ್ಣ
ಗೊ. ರು. ಚನ್ನಬಸಪ್ಪ
ಪಿ. ಎಸ್. ಶಂಕರ್
ಶಿವಶಂಕರ ಹಿರೇಮಠ
ಆರ್. ಎಸ್. ರಾಜಾರಾಮ್
ಶ್ರೀಮತಿ ಎಲ್. ಜಿ. ಸುಮಿತ್ರ

**ಸಂಪಾದಕ ಸಮಿತಿ**

*ಶ್ರೀಯುತರಾದ*
ಎಸ್. ಜಿ. ನಾಗಲೋಟಿಮಠ
ಕೆ. ವಿ. ನಾರಾಯಣ
ಪುರುಷೋತ್ತಮ ಬಿಳಿಮಲೆ
ಕರೀಗೌಡ ಬೀಚನಹಳ್ಳಿ
ಅಮೃತ ಸೋಮೇಶ್ವರ
ಸಿ. ಆರ್. ಚಂದ್ರಶೇಖರ್
ಬಿ. ಎ. ಶ್ರೀಧರ
ಲಿಂಗದೇವರು ಹಳೆಮನೆ
ಭ. ಮಲ್ಲಿಕಾರ್ಜುನ
ಮಹಾಬಲೇಶ್ವರರಾವ್
ಭಕ್ತಪ್ರಿಯ
ಎಂ. ಪಿ. ಪರಮಶೇಖರಯ್ಯ
ಶ್ರೀಮತಿ ಉಷಾ ರಾಂಕುಮಾರ್

ಲೋಕಶಿಕ್ಷಣ ನಿರ್ದೇಶನಾಲಯ
ನವಸಾಕ್ಷರ ಪುಸ್ತಕ ಮಾಲೆ - ೫೭

# ನಾವು ಮತ್ತು ಸರಕಾರ



ಡಾ. ಎಚ್.ಎಂ. ಮರುಳಸಿದ್ಧಯ್ಯ







ಪ್ರಸಾರಾಂಗ
ಕನ್ನಡ ವಿಶ್ವವಿದ್ಯಾಲಯ
ಹಂಪಿ . ೫೮೩ ೨೧೧

**Naavu Mattu Sarakaara**: By Dr. H.M. Marula siddaiah, Published by the Director of Prasaranga, Kannada University, Hampi - 583 211, KARNATAKA.
First Impression 1994 Pp. ii + 26 Rs. 8-00

---



**ಸಂಯೋಜನಾಧಿಕಾರಿ**
ಡಾ॥ ಎಚ್. ಎಸ್. ಶ್ರೀಮತಿ
ಪಠ್ಯ ಪುಸ್ತಕ ರಚನಾ ವಿಭಾಗ



**ಪ್ರಕಾಶಕರು**
ನಿರ್ದೇಶಕರು
ಪ್ರಸಾರಾಂಗ
ಕನ್ನಡ ವಿಶ್ವವಿದ್ಯಾಲಯ
ಹಂಪಿ - ೫೮೩ ೨೧೧

**ಮುಖಪುಟ ವಿನ್ಯಾಸ**
ಕೆ. ಮಕಾಳಿ

ಬೆಲೆ : ರೂ. ೮-೦೦

**ಮುದ್ರಕರು**
ಲಕ್ಷ್ಮಿ ಮುದ್ರಣಾಲಯ
ಚಾಮರಾಜಪೇಟೆ
ಬೆಂಗಳೂರು - ೧೮
ದೂರವಾಣಿ : ೬೬೧೩೧೨೩




# ನಾವು ಮತ್ತು ಸರಕಾರ

ಜೀವ ಉಳ್ಳ ಎಲ್ಲರೂ ಗುಂಪಾಗಿ ಜೀವಿಸುತ್ತಾರೆ. ಹುಳ-ಹುಪ್ಪಡಿಗಳೂ ಗುಂಪುಗುಂಪಾಗಿ ಜೀವಿಸುತ್ತವೆ. ಹಕ್ಕಿ-ಪಕ್ಕಿಗಳೂ ಒಟ್ಟು - ಒಟ್ಟಾಗಿಯೇ ಇರುತ್ತವೆ. ಇದೇ ರೀತಿಯಲ್ಲಿ ಪ್ರಾಣಿಗಳೂ ಜೀವನ ಮಾಡುತ್ತವೆ. ಹುಳುಗಳಂತೆ, ಹಕ್ಕಿಗಳಂತೆ, ಪ್ರಾಣಿಗಳಂತೆ ಮನುಷ್ಯರಾದ ನಾವೂ ಗುಂಪುಗುಂಪಾಗಿಯೇ ಬಾಳುತ್ತೇವೆ. ಜೀವಿಗಳು ಗುಂಪುಗಳಲ್ಲಿ ಬದುಕುವುದು ಸಹಜ, ಅನಿವಾರ್ಯ. ಅವು ಹುಟ್ಟುವುದೂ, ಬೆಳೆಯುವುದೂ, ಬಾಳುತ್ತಿರುವುದೂ ಕೊನೆಗೆ ಅಳಿದು ಹೋಗುವುದೂ ಗುಂಪಿನ ಪರಿಸರದಲ್ಲಿಯೇ.

ಗುಂಪುಗಳು ಒಟ್ಟಾಗಿ ಜೀವಿಸುತ್ತಿರುವುದು ಸಮುದಾಯಗಳಲ್ಲಿ; ಸಮುದಾಯ ಗಳಲ್ಲಿ ಜೀವಿಸುತ್ತಿರುವ ಎಲ್ಲ ಜೀವಿಗಳಿಗೂ ಸಮಾಜ ಇರುತ್ತದೆ. ಅಂದರೆ, ಜೀವವಿರುವ ಎಲ್ಲರಿಗೂ ಗುಂಪಿನ ಜೀವನ, ಸಮುದಾಯ ಜೀವನ ಮತ್ತು ಸಮಾಜದ ಜೀವನವು ಸಹಜವಾಗಿರುತ್ತದೆ.

ಆದರೆ, ಮನುಷ್ಯನ ಗುಂಪು, ಸಮುದಾಯ ಮತ್ತು ಸಮಾಜಗಳು ಭಿನ್ನ ರೀತಿಯಲ್ಲಿ ಇರುತ್ತವೆ. ಮನುಷ್ಯರಿಗೇ ಮೀಸಲಾದ ಸಂಸ್ಕೃತಿಯು ಇರುವುದೇ ಈ

ವ್ಯತ್ಯಾಸಕ್ಕೆ ಕಾರಣ. ಮನುಷ್ಯನು ವ್ಯಕ್ತಿಯಾಗಿಯೂ ಬೇರೆ ಜೀವಿಗಳಿಗಿಂತ ಭಿನ್ನ ರೀತಿಯಲ್ಲಿ ಇರುತ್ತಾನೆ. ಇದಕ್ಕೂ ಸಂಸ್ಕೃತಿಯೇ ಕಾರಣ. ಮನುಷ್ಯನ ಸಮಾಜವು ಹೊಂದಿರುವ ಸಂಸ್ಕೃತಿಯ ಒಂದು ಭಾಗವೇ ಸರಕಾರ.

ಮನುಷ್ಯನ ಸಮಾಜವು ಸರಿಯಾಗಿ ಇರಬೇಕಾದರೆ ಸರಕಾರವು ಅತ್ಯಗತ್ಯ. ಜನರ ಸಾಮಾಜಿಕ ಜೀವನವು ವ್ಯವಸ್ಥೆಯಿಂದ ಇರಲು ಸರಕಾರವು ಕಾಯ್ದೆ-ಕಾನೂನುಗಳನ್ನು ಜಾರಿಗೆ ತರುತ್ತದೆ. ಜನರ ಜೀವನವು ತೊಂದರೆಗಳಿಲ್ಲದೆ ಸುಖವಾಗಿ ಇರಲು ಅಗತ್ಯವಾದ ಸಮಾಜ ಕಲ್ಯಾಣ ಕಾರ್ಯಕ್ರಮಗಳನ್ನು ಕೈಗೊಳ್ಳುತ್ತದೆ. ಸರಕಾರದ ಕೆಲಸಗಳನ್ನು ನೋಡಿಕೊಳ್ಳಲು ಅನೇಕ ಜನರು ನೌಕರರಾಗಿ ದುಡಿಯುತ್ತಾರೆ. ನೌಕರರ ಜೊತೆಗೆ ಸಾರ್ವಜನಿಕರಾದ ನಾವು ಸರಕಾರದ ಕೆಲಸಗಳಲ್ಲಿ ಭಾಗವಹಿಸುತ್ತೇವೆ. ಮನುಷ್ಯನ ವ್ಯಕ್ತಿತ್ವ, ಅವನ ಗುಂಪು, ಅವನ ಸಮುದಾಯ, ಅವನ ಸಮಾಜ, ಅವನ ಸಂಸ್ಕೃತಿ, ಅವನ ಸರಕಾರ, ಅವನ ಕಾರ್ಯದ ರೀತಿಗಳು - ಈ ಎಲ್ಲವೂ ಸತತವಾಗಿ ಬದಲಾವಣೆಯನ್ನು ಹೊಂದುತ್ತಲೇ ಇರುತ್ತವೆ. ಬದಲಾವಣೆಯಿಂದ ಉಂಟಾಗುವ ಸಮಸ್ಯೆಗಳನ್ನು ಪರಿಹರಿಸಲಾಗುತ್ತದೆ. ಸಮಸ್ಯೆಗಳಿಗೆ ಪರಿಹಾರಗಳನ್ನು ನೀಡಲು ಸಂಪನ್ಮೂಲಗಳೂ ಇರುತ್ತವೆ. ಬೇಕಾದ ಈ ಸಂಪನ್ಮೂಲಗಳನ್ನು ಹೊಂದಿಸಿಕೊಳ್ಳಲು, ಸಜ್ಜುಗೊಳಿಸಲು ಸರಕಾರವೂ ಪ್ರಯತ್ನಿಸುತ್ತದೆ. ಈ ಪ್ರಯತ್ನದಲ್ಲೂ ಜನರು ಸಹಕರಿಸಿ, ದುಡಿಯಬೇಕಾಗುತ್ತದೆ. ಆದುದರಿಂದ ಸ್ವಯಂಪ್ರೇರಿತರಾದ ಸ್ವಯಂಸೇವಕರು ಹಲವಾರು ಜನ ಇರುತ್ತಾರೆ. ಇವರೂ ಸರಕಾರದ ಜೊತೆಗೆ ಸಹಕರಿಸಿ ದುಡಿಯುತ್ತಾರೆ.

## ೧. ಸಮಾಜದ ಸ್ವರೂಪ

ಮನುಷ್ಯನ ಸಮಾಜದಲ್ಲಿ ಅನೇಕ ಭಾಗಗಳಿವೆ. ಹಣಕಾಸಿಗೆ ಸಂಬಂಧಿಸಿದಂತೆ ಇರುವ ಭಾಗಕ್ಕೆ ''ಆರ್ಥಿಕ ಅಂಶ'' ಅನ್ನುತ್ತಾರೆ; ದೇವರಿಗೆ, ಪೂಜೆಗೆ, ಆತ್ಮಕ್ಕೆ ಸಂಬಂಧಿಸಿದಂತೆ ಇರುವ ಭಾಗಕ್ಕೆ ''ಧಾರ್ಮಿಕ ಅಂಶ'' ಅನ್ನುತ್ತಾರೆ;

ಜಗಳವನ್ನು ಪರಿಹರಿಸುವುದಕ್ಕೆ, ಅನ್ಯಾಯವಾಗಿದ್ದರೆ ಅದನ್ನು ಸರಪಡಿಸುವುದಕ್ಕೆ ಸಂಬಂಧಪಟ್ಟ ಭಾಗಕ್ಕೆ ''ನ್ಯಾಯಪರಿಪಾಲನೆಯ ಅಂಶ'' ಅನ್ನುತ್ತಾರೆ; ಜನರು ಅಕ್ಷರಗಳನ್ನು ಕಲಿಯಬೇಕು, ತಿಳಿವಳಿಕೆಯನ್ನು ಪಡೆಯಬೇಕು, ಜ್ಞಾನವನ್ನು ಸಂಪಾದಿಸಬೇಕು ಇಂತಹ ಕೆಲಸಗಳನ್ನು ನೋಡಿಕೊಳ್ಳುವ ಭಾಗಕ್ಕೆ ''ಶೈಕ್ಷಣಿಕ ಅಂಶ'' ಅನ್ನಲಾಗುವುದು. ಸಮಾಜದ ವ್ಯವಸ್ಥೆಯನ್ನು ಕಾಪಾಡಲು, ಜನರ ಪ್ರಾಣವನ್ನು ಮತ್ತು ಆಸ್ತಿಯನ್ನು ರಕ್ಷಿಸಲು, ಕಾಯ್ದೆ-ಕಾನೂನುಗಳನ್ನು ನೋಡಿಕೊಳ್ಳಲು, ಜನರಿಗೆ ಬರುವ ತೊಂದರೆಗಳನ್ನು ಪರಿಹರಿಸಲು ಬೇಕಾದ ಕಾರ್ಯಗಳನ್ನು ತೆಗೆದುಕೊಳ್ಳುವ ಭಾಗಕ್ಕೆ ''ರಾಜಕೀಯ ಅಂಶ'' ಅನ್ನುತ್ತಾರೆ. ಮನುಷ್ಯನಿಗೆ ದಣಿವಾದಾಗ, ಬೇಸರವಾದಾಗ, ಬಿಡುವಾದಾಗ ಅವನ ಮನಸ್ಸಿಗೆ ಸಂತೋಷ ನೀಡುವಂಥ ಕಾರ್ಯದ ಭಾಗಕ್ಕೆ ''ಮನೋರಂಜನೆಯ ಅಂಶ'' ಅನ್ನುತ್ತಾರೆ.

ಹೀಗೆ ಮನುಷ್ಯನ ಸಮಾಜವು ಬೇರೆಬೇರೆಯ ಅಂಶಗಳಿಂದ ಕೂಡಿದೆ. ಸಮಾಜದಲ್ಲಿ ಜೀವಿಸುವ ಪ್ರತಿಯೊಬ್ಬನೂ ಈ ಎಲ್ಲ ಅಂಶಗಳೊಂದಿಗೂ ಸಂಬಂಧ ಹೊಂದಿದ್ದಾನೆ. ಮನುಷ್ಯನು ಯಾವ ರೀತಿಯಲ್ಲಿ ತನ್ನ ಆರ್ಥಿಕ ಚಟುವಟಿಕೆಗಳನ್ನು ನೋಡಿಕೊಳ್ಳುತ್ತಾನೆ? ಅವನು ತನ್ನ ಧಾರ್ಮಿಕ ಕಾರ್ಯಗಳನ್ನು ಹೇಗೆ ನಡೆಸುತ್ತಾನೆ? ಅವನು ನ್ಯಾಯ ಪರಿಪಾಲನೆಯನ್ನು ಹೇಗೆ ಮಾಡುತ್ತಾನೆ? ಅವನು ಯಾವ ಶಿಕ್ಷಣವನ್ನು ಹೇಗೆ ಪಡೆಯುತ್ತಾನೆ? ಅವನು ತನ್ನ ರಾಜ್ಯವನ್ನು ಹೇಗೆ ಪಾಲಿಸುತ್ತಾನೆ? ಅವನು ಮನೋರಂಜನೆಯನ್ನು ಹೇಗೆ ಪಡೆಯುತ್ತಿದ್ದಾನೆ? ಇವೆಲ್ಲವೂ ಅವನ ಸಂಸ್ಕೃತಿಗೆ ತಕ್ಕಂತೆ ಇರುತ್ತವೆ. ಇದನ್ನು ನಾವು ತಿಳಿದುಕೊಳ್ಳಬೇಕು. ಅದನ್ನು ತಿಳಿದುಕೊಂಡರೆ, ತಿಳಿದುಕೊಂಡಂತೆ ನಡೆದರೆ ನಮ್ಮ ಬದುಕು ಸುಖಮಯ ವಾಗಿರುತ್ತದೆ. ಆದುದರಿಂದ ಸರಕಾರದ ಸ್ವರೂಪವನ್ನೂ ನಾವು ಚೆನ್ನಾಗಿ ತಿಳಿದು ಕೊಳ್ಳಬೇಕು.

## ೨. ಸರಕಾರದ ಸ್ವರೂಪ

ಸರಕಾರವು ಸಮಾಜದ ಒಂದು ಭಾಗ. ಆದರೂ ಇದು ಬಹಳ

ಮುಖ್ಯವಾದ ಭಾಗ. ರಾಜ್ಯದಲ್ಲಿ ಹುಟ್ಟಿ, ಬೆಳೆದು ಬಾಳುತ್ತಿರುವವರು ಆ ರಾಜ್ಯದ ಪ್ರಜೆಗಳು. ಪ್ರಜೆಗಳಾಗಿರದ ಇತರರೂ ರಾಜ್ಯಕ್ಕೆ ಬರಬಹುದು. ಇಲ್ಲಿ ಕೆಲವು ಕಾಲ ವಾಸ ಮಾಡಬಹುದು. ಆದರೆ ಅವರಿಗೆ ಪ್ರಜೆಯ ಹಕ್ಕುಗಳು ಇರುವುದಿಲ್ಲ. ಅವರಿಗೆ ಹೊಣೆಗಾರಿಕೆಯೂ ಅಷ್ಟಾಗಿ ಇರುವುದಿಲ್ಲ. ಅವರು ಅತಿಥಿಗಳು ಮಾತ್ರ. ಅತಿಥಿಗಳಿಗೆ ಇರಬೇಕಾದ ಹಕ್ಕುಗಳು ಮತ್ತು ಹೊಣೆಗಾರಿಕೆಗಳು ಅವರಿಗೆ ಇರುತ್ತವೆ.

ಪ್ರಜಾಪ್ರಭುತ್ವವು ನಮ್ಮ ರಾಜಕೀಯದ ತಳಹದಿ. ಸಮಾಜವಾದವೂ ನಮ್ಮ ರಾಜಕೀಯದ ತಳಹದಿಯಾಗಿದೆ. ಆದುದರಿಂದ ಪ್ರಜಾಪ್ರಭುತ್ವ ಮತ್ತು ಸಮಾಜವಾದವು ನಮ್ಮ ರಾಜಕೀಯದ ಆದರ್ಶವಾಗಿದೆ. ಈ ಆದರ್ಶದ ಪ್ರಕಾರ ರಾಜ್ಯದಲ್ಲಿರುವ ಪ್ರಜೆಗಳಾದ ನಮ್ಮೆಲ್ಲರಿಗೂ ಸಮಾನವಾದ ಸ್ಥಾನ-ಮಾನಗಳಿವೆ. ಅದರಂತೆಯೇ ನಮಗೆ ಹಕ್ಕು-ಹೊಣೆಗಾರಿಕೆಗಳೂ ಇವೆ. ನಮ್ಮ ರಾಜ್ಯವು ಸುಖೀ ರಾಜ್ಯ. ಇದನ್ನು ಕ್ಷೇಮರಾಜ್ಯ ಎಂದೂ ಕರೆಯಲಾಗುತ್ತದೆ. ಆದುದರಿಂದ ನಮ್ಮ ಸುಖ-ಸಂತೋಷಗಳನ್ನು ನಮ್ಮ ಸರಕಾರವು ನೋಡಿಕೊಳ್ಳುವುದು ಕಡ್ಡಾಯವಾಗಿದೆ. ಇದರಂತೆಯೇ ನಮ್ಮ ರಾಜ್ಯವು ಲೌಕಿಕ ರಾಜ್ಯವಾಗಿದೆ. ಅಂದರೆ ನಮ್ಮ ಸರಕಾರವು ಯಾವುದೇ ಒಂದು ಮತ-ಧರ್ಮಕ್ಕೆ ಸೇರಿರುವುದಿಲ್ಲ.ಅದಕ್ಕೆ ಎಲ್ಲ ಮತ-ಧರ್ಮಗಳೂ ಸಮಾನವಾದವುಗಳೇ ಆಗಿವೆ. ನಮ್ಮ ರಾಜ್ಯದಲ್ಲಿ ಜಾತಿಪದ್ಧತಿಯನ್ನು ಮಾನ್ಯ ಮಾಡಿಲ್ಲ. ನಮ್ಮ ರಾಜ್ಯದಲ್ಲಿ ಅಸ್ಪೃಶ್ಯತೆಯನ್ನು ತೊಡೆದುಹಾಕಲಾಗಿದೆ.

ಇಂಥ ರಾಜ್ಯವನ್ನು ನೋಡಿಕೊಳ್ಳುತ್ತಿರುವ ಸರಕಾರವು ಕೂಡಾ ಪ್ರಜಾ ಪ್ರಭುತ್ವ, ಸಮಾಜವಾದ, ಕ್ಷೇಮ ಮತ್ತು ಲೌಕಿಕ ಅಂಶಗಳನ್ನು ಅಳವಡಿಸಿಕೊಂಡಿದೆ. ಇದನ್ನು ನಾವು ಅಂಗೀಕರಿಸಿರುವ ನಮ್ಮ ಸಂವಿಧಾನದಲ್ಲಿ ಕಾಣಬಹುದು. ಸಂವಿಧಾನವನ್ನು ರಾಜ್ಯಘಟನೆ ಎಂದೂ ಕರೆಯಲಾಗುತ್ತದೆ. ನಮ್ಮ ಭಾರತಕ್ಕೆ ಸ್ವಾತಂತ್ರ್ಯ ಬಂದದ್ದು ೧೯೪೭ರಲ್ಲಿ. ನಾವು ನಮ್ಮದೇ ಆದ ಸಂವಿಧಾನವನ್ನು ೧೯೫೦ರಲ್ಲಿ ಅಂಗೀಕರಿಸಿದೆವು.ಈ ಸಂವಿಧಾನವು ನಮಗೆ ಕೆಲವು ಮೂಲಭೂತ ಹಕ್ಕುಗಳನ್ನು ಕೊಟ್ಟಿದೆ. ನಮ್ಮ ಕ್ಷೇಮವನ್ನು ಕಾಪಾಡಲು ಸರಿಯಾದ ಕ್ರಮಗಳನ್ನು ತೆಗೆದುಕೊಳ್ಳಲು ಸರಕಾರಕ್ಕೆ ಈ ಸಂವಿಧಾನವು ನಿರ್ದೇಶನಗಳನ್ನು ನೀಡಿದೆ. ನಮ್ಮ

ಭಾರತ
(ಕೇಂದ್ರ ಸರಕಾರ)

ಕರ್ನಾಟಕ
(ರಾಜ್ಯ ಸರಕಾರ)

ಜಿಲ್ಲೆ
(ಪಂಚಾಯತ್)

ತಾಲ್ಲೂಕ್
(ಪಂಚಾಯತ್)

ಹೋಬಳಿ

ಗ್ರಾಮ
(ಪಂಚಾಯತ್)

ಜೀವನವು ಸೊಗಸಾಗಿ ಇರಲು ನಾವು ಒಳ್ಳೆಯ ಪ್ರಜೆಗಳೂ ಆಗಿರಬೇಕಾಗುತ್ತದೆ. ಸರಕಾರವು ನಮ್ಮದೇ ಆಗಿದೆ. ಆದುದರಿಂದ ನಾವು ಸರಕಾರದ ಕೆಲಸಗಳಲ್ಲಿ ಮನಸಿಟ್ಟು ಭಾಗವಹಿಸಬೇಕು. ನಮ್ಮ ಸಂವಿಧಾನವು ನಮಗೆ ಒಳ್ಳೆಯ ಸರಕಾರವನ್ನು ಕೊಟ್ಟಿದೆ. ಪ್ರಜೆಗಳಾದ ನಾವು ನಮ್ಮದೇ ಆದ ಸರಕಾರವನ್ನು ನಡೆಸಬೇಕು. ನಮಗೆ ಹಕ್ಕುಗಳು ಇದ್ದ ಹಾಗೆ ನಮಗೆ ಹೊಣೆಗಾರಿಕೆಗಳೂ ಇರುತ್ತವೆ. ಅಂದರೆ, ಸರಕಾರದಿಂದ ನಮಗೆ ಸಹಾಯ ದೊರೆಯಬೇಕು; ಸರಕಾರಕ್ಕೆ ನಮ್ಮ ನೆರವೂ ಬೇಕು.

ನಮ್ಮದು ಭಾರತ ದೇಶ. ಇದು ಬಹಳ ದೊಡ್ಡ ರಾಷ್ಟ್ರ. ಭಾರತ ಸರಕಾರವು ಇದರ ಆಡಳಿತವನ್ನು ನಡೆಸುತ್ತದೆ. ಇದನ್ನು ಕೇಂದ್ರ ಸರಕಾರ ಎಂದು ಕೂಡಾ ಕರೆಯಲಾಗುತ್ತದೆ.

ನಮ್ಮ ಭಾರತದಲ್ಲಿ ಅನೇಕ ರಾಜ್ಯಗಳಿವೆ. ಇವುಗಳ ಜೊತೆಗೆ ಕೆಲವು ಬೇರೆ ಪ್ರದೇಶಗಳೂ ಇವೆ. ಕೇಂದ್ರ ಸರಕಾರವು ಇವುಗಳ ಆಡಳಿತವನ್ನು ನೇರವಾಗಿ ನಡೆಸುತ್ತದೆ. ಕೇಂದ್ರದಲ್ಲಿ ಇರುವ ಸರಕಾರವು ಇಡೀ ಭಾರತದ ಆಡಳಿತವನ್ನು ನೋಡಿಕೊಳ್ಳುತ್ತದೆ.

ನಮ್ಮ ಕರ್ನಾಟಕವು ಒಂದು ರಾಜ್ಯ. ಕರ್ನಾಟಕದಲ್ಲಿಯೂ ಒಂದು ಸರಕಾರವಿದೆ. ಕರ್ನಾಟಕ ಸರಕಾರವು ಇಡೀ ಕರ್ನಾಟಕದ ಆಡಳಿತವನ್ನು ನೋಡಿಕೊಳ್ಳುತ್ತದೆ. ಭಾರತ ಸರಕಾರವನ್ನು ಪ್ರಜೆಗಳು ನಡೆಸುತ್ತಾರೆ. ಅದರಂತೆಯೇ ಕರ್ನಾಟಕ ಸರಕಾರವನ್ನು ಪ್ರಜೆಗಳೇ ನಡೆಸುತ್ತಾರೆ.

ಇಡೀ ದೇಶಕ್ಕೆ ಒಬ್ಬ ಅಧ್ಯಕ್ಷ ಇರುತ್ತಾರೆ. ಅಧ್ಯಕ್ಷರನ್ನು ರಾಷ್ಟ್ರಪತಿ ಎಂದು, ದೇಶದ ಪ್ರಥಮ ಪ್ರಜೆ ಎಂದೂ, ಕರೆಯಲಾಗುತ್ತದೆ. ಅಧ್ಯಕ್ಷರನ್ನು ಪ್ರಜೆಗಳ ಪ್ರತಿನಿಧಿಗಳು ಆರಿಸುತ್ತಾರೆ. ದೇಶಕ್ಕೆ ಅಧ್ಯಕ್ಷರು ಇದ್ದಂತೆ ರಾಜ್ಯಕ್ಕೆ ಒಬ್ಬ ಮುಖ್ಯಸ್ಥ ಇರುತ್ತಾರೆ. ಈ ಮುಖ್ಯಸ್ಥರನ್ನು ರಾಜ್ಯಪಾಲ ಅನ್ನುತ್ತಾರೆ. ಇಂಗ್ಲಿಷ್

ಭಾಷೆಯಲ್ಲಿ ಇವರನ್ನು ಗವರ್ನರ್ ಎಂದು ಕರೆಯುತ್ತಾರೆ. ಕೇಂದ್ರಾಡಳಿತ ಪ್ರದೇಶಗಳಿಗೆ ಉಪ-ರಾಜ್ಯಪಾಲರು ಇರುತ್ತಾರೆ. ರಾಜ್ಯಪಾಲರನ್ನು ಮತ್ತು ಉಪ ರಾಜ್ಯಪಾಲರನ್ನು ಅಧ್ಯಕ್ಷರು ನೇಮಿಸುತ್ತಾರೆ.

ಭಾರತ ಸರಕಾರದ ಪ್ರಮುಖರಾಗಿ ಒಬ್ಬ ಪ್ರಧಾನ ಮಂತ್ರಿ ಇರುತ್ತಾರೆ. ರಾಜ್ಯ ಸರಕಾರದ ಪ್ರಮುಖರಾಗಿ ಒಬ್ಬ ಮುಖ್ಯಮಂತ್ರಿ ಇರುತ್ತಾರೆ. ಪ್ರಧಾನ ಮಂತ್ರಿಯು ಭಾರತ ಸರಕಾರದ ಮಂತ್ರಿ ಮಂಡಲದ ನಾಯಕರಾಗಿರುತ್ತಾರೆ. ಮುಖ್ಯ ಮಂತ್ರಿಯು ರಾಜ್ಯ ಸರಕಾರದ ಮಂತ್ರಿಮಂಡಲದ ನಾಯಕರಾಗಿರುತ್ತಾರೆ. ಮಂತ್ರಿ ಮಂಡಲದ ಎಲ್ಲ ಮಂತ್ರಿಗಳೂ ತಮ್ಮ ನಾಯಕರಿಗೆ ನಿಷ್ಠೆಯಿಂದ ಇರಬೇಕು. ರಾಷ್ಟ್ರದ ಅಧ್ಯಕ್ಷರಿಗೆ ಭಾರತ ಸರಕಾರದ ಮಂತ್ರಿಮಂಡಲವು ವಿಧೇಯದಿಂದ ವರ್ತಿಸಬೇಕು. ಇದೇ ರೀತಿಯಲ್ಲಿ ರಾಜ್ಯ ಸರಕಾರದ ಮಂತ್ರಿ ಮಂಡಲವು ತಮ್ಮ ರಾಜ್ಯಪಾಲರಿಗೆ ವಿಧೇಯದಿಂದ ಇರಬೇಕು.

ಭಾರತ ಸರಕಾರದ ಮಂತ್ರಿಗಳು ಲೋಕಸಭೆಯ ಮತ್ತು ರಾಜ್ಯ ಸಭೆಯ ಸದಸ್ಯರಾಗಿರುತ್ತಾರೆ. ರಾಜ್ಯ ಸರಕಾರದ ಮಂತ್ರಿಗಳು ವಿಧಾನ ಸಭೆ ಮತ್ತು ಪರಿಷತ್ತಿನ ಸದಸ್ಯರಾಗಿರುತ್ತಾರೆ. ಕೆಲವು ರಾಜ್ಯಗಳಲ್ಲಿ ವಿಧಾನ ಪರಿಷತ್ತು ಇರುವುದಿಲ್ಲ.ಅಂಥ ಸಂದರ್ಭದಲ್ಲಿ ಮಂತ್ರಿಗಳು ವಿಧಾನ ಸಭೆಯ ಸದಸ್ಯರು ಮಾತ್ರವೇ ಆಗಿರುತ್ತಾರೆ. ಲೋಕ ಸಭೆಯ, ರಾಜ್ಯ ಸಭೆಯ, ವಿಧಾನ ಸಭೆಯ, ವಿಧಾನ ಪರಿಷತ್ತಿನ ಸದಸ್ಯರಾಗಿಲ್ಲದವರೂ ಕೆಲವು ವೇಳೆ ಮಂತ್ರಿಗಳು ಆಗಬಹುದು. ಆದರೆ, ಅಂಥವರು ಆರು ತಿಂಗಳ ಒಳಗೇ ಸಂಬಂಧಿಸಿದ ಸಭೆಗೆ ಸದಸ್ಯರಾಗಿ ಆರಿಸಿ ಬರಬೇಕು. ಅಥವಾ ನಾಮಕರಣಗೊಳ್ಳಬೇಕು.

ಮಂತ್ರಿ ಮಂಡಲಗಳು ಸಂಬಂಧಪಟ್ಟ ಲೋಕಸಭೆ ಮತ್ತು ರಾಜ್ಯ ಸಭೆಗೆ ಅಥವಾ ವಿಧಾನಸಭೆ ಮತ್ತು ವಿಧಾನ ಪರಿಷತ್ತಿಗೆ ಜವಾಬ್ದಾರರಾಗಿರಬೇಕು.

ಸರಕಾರದಲ್ಲಿ ಮುಖ್ಯವಾಗಿ ಮೂರು ಅಂಗಗಳು ಅಥವಾ ಭಾಗಗಳು ಇರುತ್ತವೆ. ಇವುಗಳನ್ನು ಕಾರ್ಯಾಂಗ, ಶಾಸನಾಂಗ ಮತ್ತು ನ್ಯಾಯಾಂಗ ಎಂದು

ಕರೆಯಲಾಗುವುದು. ಕಾರ್ಯಾಂಗವೆಂದರೆ ಮಂತ್ರಿಮಂಡಲಗಳು. ಶಾಸನಾಂಗ ಅಂದರೆ ಪ್ರಜೆಗಳಿಂದ ಆಯ್ಕೆಯಾದ ಪ್ರತಿನಿಧಿಗಳ ಸಭೆಗಳು. ಅಂದರೆ, ಲೋಕಸಭೆ, ರಾಜ್ಯ ಸಭೆ, ವಿಧಾನ ಸಭೆ ಮತ್ತು ವಿಧಾನ ಪರಿಷತ್ತು. ಈ ಸಭೆಗಳು ಜನರ ಕಲ್ಯಾಣಕ್ಕೆ ಬೇಕಾದ ಕಾಯ್ದೆ-ಕಾನೂನುಗಳನ್ನು ಮಾಡುತ್ತವೆ. ಜನರ ಪ್ರತಿನಿಧಿಗಳಾಗಿ ಈ ಸಭೆಗಳ ಸದಸ್ಯರು ಸಭೆ ಸೇರಿ, ಚರ್ಚೆ ಮಾಡಿ ಶಾಸನಗಳನ್ನು ಸಿದ್ಧಗೊಳಿಸುತ್ತಾರೆ. ಸಂಬಂಧಪಟ್ಟ ರಾಜ್ಯದ ಅಥವಾ ರಾಷ್ಟ್ರದ ಮುಖ್ಯಸ್ಥರು ಒಪ್ಪಿಗೆ ಕೊಟ್ಟ ಮೇಲೆ ಆ ಶಾಸನಗಳು ಜಾರಿಗೆ ಬರುತ್ತವೆ.

ಹೀಗೆ ಸಿದ್ಧಗೊಳಿಸಿದ, ಶಾಸನಗಳನ್ನು ಜಾರಿಗೆ ಕೊಡುವವರು ಕಾರ್ಯಾಂಗದವರು. ಶಾಸನಗಳನ್ನು ಜಾರಿಗೊಳಿಸಿ, ಜನರ ಸುಖ-ಸಂತೋಷವನ್ನು, ಅಭಿವೃದ್ಧಿಯನ್ನು ಸರಕಾರವು ನೋಡಿಕೊಳ್ಳುತ್ತದೆ. ಜನರಿಗೆ ತೊಂದರೆಗಳು ಆಗದಂತೆ ಅವುಗಳನ್ನು ತಡೆಗಟ್ಟುತ್ತದೆ. ಕಷ್ಟಗಳು ಬಂದರೆ, ಅವುಗಳನ್ನು ಪರಿಹರಿಸುತ್ತದೆ.

ಕಾನೂನುಗಳನ್ನು ಜಾರಿಗೊಳಿಸದಿದ್ದರೆ ಅಥವಾ ಸರಿಯಾಗಿ ಜಾರಿಗೊಳಿಸ ದಿದ್ದರೆ ಜನರು ನ್ಯಾಯಾಲಯಗಳಿಗೆ ಹೋಗಬಹುದು. ನ್ಯಾಯಾಲಯಗಳು ಕಾನೂನಿನ ಪ್ರಕಾರ ನ್ಯಾಯವನ್ನು ನೀಡುತ್ತವೆ. ನ್ಯಾಯಾಲಯಗಳನ್ನು ನ್ಯಾಯಾಂಗವೆಂದು ಕರೆಯಬಹುದು. ಶಾಸನಾಂಗವು ಕಾನೂನುಗಳನ್ನು ಸಂವಿಧಾನಕ್ಕೆ ಅನುಗುಣವಾಗಿ ಸಿದ್ಧಗೊಳಿಸಬೇಕು. ಸಂವಿಧಾನಕ್ಕೆ ಅನುಗುಣವಾಗಿ ಕಾನೂನು ಇರದಿದ್ದರೆ ನ್ಯಾಯಾಂಗವು ಅದನ್ನು ತಿರಸ್ಕರಿಸಬಹುದು. ಶಾಸನಾಂಗವು ಶಾಸನವನ್ನು ಸರಿಪಡಿಸಬೇಕು. ಕಾರ್ಯಾಂಗವು ಸರಿಯಾಗಿ ನಡೆದುಕೊಳ್ಳದಿದ್ದರೆ ಶಾಸನಾಂಗವು ಅದನ್ನು ಎಚ್ಚರಿಸ ಬಹುದು. ಇದೇ ರೀತಿಯಲ್ಲಿ ನ್ಯಾಯಾಂಗವು ಕಾರ್ಯಾಂಗಕ್ಕೆ ಮತ್ತು ಶಾಸನಾಂಗಕ್ಕೆ ಸೂಕ್ತ ಮಾರ್ಗದರ್ಶನ ಮಾಡಬಹುದು.

ಸರಕಾರದ ಈ ಮೂರು ಅಂಗಗಳಾದ ಕಾರ್ಯಾಂಗ, ಶಾಸನಾಂಗ ಮತ್ತು ನ್ಯಾಯಾಂಗಗಳು ಹೊಂದಿಕೊಂಡು ನಡೆಯುತ್ತವೆ. ಯಾವುದಾದರೂ ತಪ್ಪು ಮಾಡಿದರೆ ಬೇರೆಯವು ತಿದ್ದುತ್ತವೆ. ಯಾರಿಗೂ ಅನ್ಯಾಯವಾಗದ ಹಾಗೆ, ತೊಂದರೆಗಳು ಹೆಚ್ಚದ

ಹಾಗೆ ಈ ಮೂರು ಅಂಗಗಳು ಕೆಲಸ ಮಾಡಬೇಕು. ಈ ಮೂರೂ ಅಂಗಗಳಲ್ಲಿ ಜನರು ಪಾಲ್ಗೊಳ್ಳುತ್ತಾರೆ. ಇವು ಹೇಗೆ ಕೆಲಸ ಮಾಡುತ್ತವೆ ಎಂಬುದನ್ನು ನಾವು ಬಹು ಎಚ್ಚರಿಕೆಯಿಂದ ನೋಡಬೇಕು. ಅವು ತಪ್ಪಿ ನಡೆದರೆ ನಾವು ಮಾರ್ಗದರ್ಶನ ಮಾಡಬೇಕು. ಇದಕ್ಕೆ ನಾವು ಸಿದ್ಧರಾಗಿರಬೇಕು. ಅಂದರೆ, ನಾವು ಬುದ್ಧಿವಂತರಾಗಿರಬೇಕು; ಎಚ್ಚರಿಕೆಯಿಂದ ಸರಕಾರದ ಕೆಲಸವನ್ನು ನೋಡಬೇಕು; ಸಂದರ್ಭ ಬಂದಾಗ ಸರಕಾರಕ್ಕೆ ಬೇಕಾದ ನೆರವನ್ನು ನೀಡಬೇಕು.

## ೩. ವಿವಿಧ ಹಂತದ ಸರಕಾರಗಳು

ರಾಜಕೀಯ ಅಧಿಕಾರವು ಒಬ್ಬ ವ್ಯಕ್ತಿಯ ಕೈಯಲ್ಲಿಯೇ ಇರಬಾರದು. ಅಧಿಕಾರವು ಒಂದು ಗುಂಪಿನಲ್ಲಿಯೂ ಗಟ್ಟಿಯಾಗಿ ಇರಕೂಡದು. ಯಾರಲ್ಲಿಯೇ ಆಗಲಿ ಅಧಿಕಾರವು ಒಟ್ಟಾಗಿ, ಗಟ್ಟಿಯಾಗಿ ಇದ್ದರೆ ಅದನ್ನು ಕೇಂದ್ರೀಕರಣ ಅನ್ನುತ್ತಾರೆ. ಅಧಿಕಾರವು ಕೇಂದ್ರೀಕರಣ ಆಗಬಾರದು. ಅಂದರೆ, ಅಧಿಕಾರವನ್ನು ಜನರೆಲ್ಲರೂ ಹಂಚಿಕೊಳ್ಳಬೇಕು. ರಾಷ್ಟ್ರದ ಪ್ರತಿಯೊಬ್ಬ ಪ್ರಜೆಯೂ ಸಮಾನವಾದ ಹಕ್ಕನ್ನು ಪಡೆದಿದ್ದಾನೆ. ಆದುದರಿಂದ ಅವನಿಗೆ ರಾಜಕೀಯದ ಅಧಿಕಾರವು ಇರುತ್ತದೆ. ರಾಜಕೀಯದ ಅಧಿಕಾರವನ್ನು ಹಂಚಬೇಕಾಗುತ್ತದೆ. ಅಧಿಕಾರವನ್ನು ಹಂಚುವುದಕ್ಕೆ ಅಧಿಕಾರ ವಿಕೇಂದ್ರೀಕರಣ ಅನ್ನುತ್ತಾರೆ. ಅಧಿಕಾರ ವಿಕೇಂದ್ರೀಕರಣದಿಂದ ಜನರು ತಮ್ಮ ತಮ್ಮ ಅಧಿಕಾರವನ್ನು ಚಲಾಯಿಸಬಹುದು. ತಮ್ಮ ತಮ್ಮ ಅಧಿಕಾರವನ್ನು ಉಪಯೋಗಿಸಿಕೊಂಡು ಜನರು ತಮ್ಮ ಉದ್ಧಾರವನ್ನು ತಾವೇ ಮಾಡಿಕೊಳ್ಳಬೇಕು.

ಅಧಿಕಾರ ವಿಕೇಂದ್ರೀಕರಣದ ತತ್ತ್ವವನ್ನು ಅನುಸರಿಸಿ ಬೇರೆಬೇರೆ ಹಂತಗಳಲ್ಲಿ ಸರಕಾರವನ್ನು ವ್ಯವಸ್ಥೆ ಮಾಡಲಾಗುತ್ತದೆ. ಹಳ್ಳಿಗಳ ಮಟ್ಟದಲ್ಲಿ ಗ್ರಾಮ ಪಂಚಾಯತಿಗಳು ಇರುತ್ತವೆ. ನಮ್ಮ ಭಾರತ ದೇಶದಲ್ಲಿ ಬಹು ಪುರಾತನ ಕಾಲದಿಂದಲೂ ಪಂಚಾಯತಿಗಳು ಇದ್ದವು. ಇವುಗಳನ್ನು ಹೊಸ ರೀತಿಯಲ್ಲಿ ವ್ಯವಸ್ಥೆ ಮಾಡಲಾಗಿದೆ. ಹಳ್ಳಿಗಳಲ್ಲಿರುವವರು ತಮ್ಮ ಪಂಚಾಯತಿಯ ಸದಸ್ಯರನ್ನು



ಮಾದರಿ ಗ್ರಾಮ

ಆರಿಸುತ್ತಾರೆ. ಯಾರಿಗೆ ಹದಿನೆಂಟು ವರ್ಷ ಆಗಿದೆಯೊ ಅಂಥವರೆಲ್ಲರೂ ಚುನಾವಣೆಯಲ್ಲಿ ಭಾಗವಹಿಸಬಹುದು. ಹದಿನೆಂಟು ವರ್ಷ ವಯಸ್ಸು ಮತ್ತು ಅದಕ್ಕಿಂತಲೂ ಹೆಚ್ಚು ವಯಸ್ಸು ಆದವರು ಮತದಾರರಾಗುತ್ತಾರೆ. ಅವರು ತಮ್ಮ ಪ್ರತಿನಿಧಿಗಳನ್ನು ಆರಿಸುತ್ತಾರೆ. ಪಂಚಾಯತಿಯ ಗಾತ್ರಕ್ಕೆ ತಕ್ಕಂತೆ ಅದರ ಸದಸ್ಯರ ಸಂಖ್ಯೆ ಇರುತ್ತದೆ. ಪಂಚಾಯತಿಯು ಸ್ಥಳೀಯ ಸರಕಾರ. ಇದರಲ್ಲಿ ಎಲ್ಲ ಗುಂಪಿನ ಜನರೂ ಇರಬೇಕು. ಆದುದರಿಂದಲೇ ಮಹಿಳೆಯರಿಗೆ, ಹಿಂದುಳಿದವರಿಗೆ, ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ಬುಡಕಟ್ಟಿನವರಿಗೆ ಪ್ರಾತಿನಿಧ್ಯ ಇರುತ್ತದೆ.ರಾಜ್ಯ ಸರಕಾರವು ಕಾನೂನಿನ ಪ್ರಕಾರ ಪಂಚಾಯತಿಯ ಚುನಾವಣೆ ನಡೆಸುತ್ತದೆ. ಚುನಾವಣೆಯ ಮೂಲಕ ಸದಸ್ಯರ ಆಯ್ಕೆ ಆಗುತ್ತದೆ.

ಗ್ರಾಮ ಪಂಚಾಯತಿಯು ತೀರಾ ಕೆಳ ಹಂತದಲ್ಲಿ ಇರುವ ಸ್ಥಳೀಯ ಸರಕಾರ. ಇದರ ಮೇಲಿನ ಹಂತದಲ್ಲಿ ತಾಲ್ಲೂಕು ಮಟ್ಟದಲ್ಲಿ ಇನ್ನೊಂದು



ಪಂಚಾಯತಿ ಸದಸ್ಯರು ಚರ್ಚೆಯಲ್ಲಿ

ಪಂಚಾಯತಿ ಸರಕಾರ ಇರುತ್ತದೆ. ಇದನ್ನು ತಾಲ್ಲೂಕು ಪಂಚಾಯತಿ ಅನ್ನುತ್ತಾರೆ. ಈ ಪಂಚಾಯತಿಗೂ ಸದಸ್ಯರನ್ನು ಚುನಾವಣೆಯ ಮೂಲಕ, ಬೇರೆ ಬೇರೆ ವಿಧಾನಗಳ ಮೂಲಕ ಆರಿಸಲಾಗುತ್ತದೆ.

ತಾಲ್ಲೂಕು ಪಂಚಾಯತಿಯ ಮೇಲಿನ ಹಂತದಲ್ಲಿ ಜಿಲ್ಲಾ ಪಂಚಾಯತಿಯು ಇರುತ್ತದೆ. ಜಿಲ್ಲಾ ಪಂಚಾಯತಿಯೂ ಸ್ಥಳೀಯ ಸರಕಾರ. ಈ ಪಂಚಾಯತಿಯು ಇಡೀ ಜಿಲ್ಲೆಗೆ ಸೇರುತ್ತದೆ. ಜಿಲ್ಲೆಯ ಅಭಿವೃದ್ಧಿ ಕಾರ್ಯಗಳನ್ನು ಜಿಲ್ಲಾ ಪಂಚಾಯತಿಯೇ ನೋಡಿಕೊಳ್ಳುತ್ತದೆ. ಜಿಲ್ಲಾ ಪಂಚಾಯತಿಯು ತಾಲ್ಲೂಕು ಪಂಚಾಯತಿಯ ಕೆಲಸವನ್ನು ಪರಿಶೀಲಿಸುತ್ತದೆ. ತಾಲ್ಲೂಕು ಪಂಚಾಯತಿಯು ಗ್ರಾಮ ಪಂಚಾಯತಿಗೆ ಮಾರ್ಗದರ್ಶನ ಮಾಡುತ್ತದೆ.

ಕರ್ನಾಟಕ ಪಂಚಾಯತಿ ಅಧಿನಿಯಮವನ್ನು ೧೯೯೩ರಲ್ಲಿ ಜಾರಿಗೆ ತರಲಾಯಿತು. ಇದರ ಪ್ರಕಾರ ಕರ್ನಾಟಕದಲ್ಲಿ ೨೫೩೬ ಗ್ರಾಮ ಪಂಚಾಯತಿಗಳಿವೆ;

೧೭೫ ತಾಲ್ಲೂಕು ಪಂಚಾಯತಿಗಳಿವೆ; ಮತ್ತು ೨೦ ಜಿಲ್ಲಾ ಪಂಚಾಯತಿಗಳಿವೆ.

ಎಲ್ಲಾ ಪಂಚಾಯತಿಗಳಿಗೂ ಚುನಾವಣೆಯು ನಡೆಯುತ್ತದೆ. ಆದರೆ, ಗ್ರಾಮ ಪಂಚಾಯತಿಗಳಿಗೆ ನಡೆಯುವ ಚುನಾವಣೆಯಲ್ಲಿ ರಾಜಕೀಯ ಪಕ್ಷಗಳು ಭಾಗವಹಿಸುವಂತಿಲ್ಲ. ತಾಲ್ಲೂಕು ಮತ್ತು ಜಿಲ್ಲಾ ಪಂಚಾಯತಿಗಳಿಗೆ ನಡೆಯುವ ಚುನಾವಣೆಯಲ್ಲಿ ರಾಜಕೀಯ ಪಕ್ಷಗಳು ಭಾಗವಹಿಸಬಹುದು. ತಾಲ್ಲೂಕು ಪಂಚಾಯತಿಗಳಲ್ಲಿ ಆಯ್ಕೆಯಾದ ಸದಸ್ಯರ ಜೊತೆಗೆ ಗ್ರಾಮ ಪಂಚಾಯತಿಯ ಕೆಲವು ಅಧ್ಯಕ್ಷರು ಆ ತಾಲ್ಲೂಕಿನಿಂದ ಆರಿಸಿಬಂದ ಶಾಸನ ಸಭೆಯ ಮತ್ತು ಸಂಸತ್ತಿನ ಸದಸ್ಯರು ಪದನಿಮಿತ್ತ ಸದಸ್ಯರಾಗಿರುತ್ತಾರೆ. ಜಿಲ್ಲಾ ಪಂಚಾಯತಿಯಲ್ಲಿ ಆಯ್ಕೆಯಾದ ಸದಸ್ಯರ ಜೊತೆಗೆ ತಾಲ್ಲೂಕು ಪಂಚಾಯತಿಯ ಎಲ್ಲ ಅಧ್ಯಕ್ಷರೂ, ಆ ಜಿಲ್ಲೆಯ ಶಾಸನ ಸಭೆಯ ಮತ್ತು ಸಂಸತ್ತಿನ ಸದಸ್ಯರೂ ಪದನಿಮಿತ್ತ ಸದಸ್ಯರಾಗಿರುತ್ತಾರೆ.

ಪಂಚಾಯತಿ ರಾಜ್ಯದ ಆಡಳಿತದಿಂದ ಸಾಮಾನ್ಯ ಜನರು ಸರಕಾರದ ಆಡಳಿತದಲ್ಲಿ ಭಾಗವಹಿಸಿದಂತಾಗುತ್ತದೆ. ಗ್ರಾಮಗಳ, ತಾಲ್ಲೂಕಿನ ಮತ್ತು ಜಿಲ್ಲೆಯ ಎಲ್ಲ ನಿಟ್ಟಿನ ಅಭಿವೃದ್ಧಿಯು ಪಂಚಾಯತಿಗಳಿಂದಲೇ ಆಗಬೇಕಾಗುತ್ತದೆ. ರಾಜ್ಯ ಸರಕಾರವು ಪಂಚಾಯತಿಗಳಿಗೆ ಸೂಕ್ತವಾದ ನೆರವನ್ನು ನೀಡುತ್ತದೆ.

ಜಿಲ್ಲಾ ಪಂಚಾಯತಿಗಳ ಮೇಲಿನ ಹಂತದಲ್ಲಿ ರಾಜ್ಯ ಸರಕಾರವು ಇರುತ್ತದೆ. ಪ್ರಜಾಪ್ರಭುತ್ವದ ಪ್ರಕಾರ ಜನರು ರಾಜ್ಯದ ಶಾಸನ ಸಭೆಗೆ ಪ್ರತಿನಿಧಿಗಳನ್ನು ಆರಿಸಿ ಕಳಿಸುತ್ತಾರೆ. ಪ್ರತಿಯೊಂದು ಶಾಸನ ಸಭೆಯಲ್ಲಿ ವಿಧಾನ ಸಭೆ ಮತ್ತು ವಿಧಾನ ಪರಿಷತ್ತು ಎಂಬ ಎರಡು ಸಭೆಗಳಿರುತ್ತವೆ. ಈ ಸಭೆಗಳಿಗೆ ನೇರವಾಗಿ, ಇಲ್ಲವೆ ಅಪ್ರತ್ಯಕ್ಷವಾಗಿ ಪ್ರತಿನಿಧಿಗಳನ್ನು ಆರಿಸಲಾಗುವುದು. ಕೆಲವು ಸದಸ್ಯರನ್ನು ರಾಜ್ಯಪಾಲರು ನಾಮಕರಣ ಮಾಡುತ್ತಾರೆ.

ರಾಜ್ಯ ಸರಕಾರದ ಮೇಲಿನ ಹಂತದಲ್ಲಿ ಭಾರತ ಸರಕಾರ ಇದೆ.

ಇದನ್ನು ಕೇಂದ್ರ ಸರಕಾರ ಎನ್ನಲಾಗುತ್ತದೆ. ಇದನ್ನು ರಾಷ್ಟ್ರದ ಸರಕಾರ ಎಂದು ಕೂಡಾ ಕರೆಯಲಾಗುತ್ತದೆ. ಭಾರತ ಸರಕಾರದ ಅಧಿಕಾರವು ಇಡೀ ಭಾರತ ರಾಷ್ಟ್ರಕ್ಕೆ ವ್ಯಾಪಿಸಿರುತ್ತದೆ. ರಾಷ್ಟ್ರಮಟ್ಟದಲ್ಲಿನ ಕಾರ್ಯಾಂಗ, ಶಾಸನಾಂಗ ಮತ್ತು ನ್ಯಾಯಾಂಗ ಇವೆಲ್ಲವೂ ಇಡೀ ರಾಷ್ಟ್ರಕ್ಕೆ ಸೇರಿವೆ. ಇವುಗಳ ಕಾರ್ಯಗಳು ಕೂಡಾ ಇಡೀ ರಾಷ್ಟ್ರಕ್ಕೆ ಅನ್ವಯಿಸುತ್ತವೆ.

ರಾಷ್ಟ್ರಮಟ್ಟದಲ್ಲಿ ಕೆಲವು ಪ್ರಮುಖವಾದ ಸಂಸ್ಥೆಗಳಿವೆ. ರಾಷ್ಟ್ರದಲ್ಲಿ ಚುನಾವಣೆಗಳನ್ನು ನಡೆಸಲು ಒಂದು ಚುನಾವಣಾ ಆಯೋಗವಿದೆ. ಇದು ಒಂದು ಸ್ವಾಯತ್ತ ಸಂಸ್ಥೆ. ಯಾವ ಪ್ರಭಾವಕ್ಕೂ ಒಳಗಾಗದೇ ಚುನಾವಣೆಗಳನ್ನು ನಡೆಸುತ್ತದೆ. ಚುನಾವಣೆಯ ಮೂಲಕ ಸಂಸತ್ತಿಗೆ ಮತ್ತು ಶಾಸನ ಸಭೆಗಳಿಗೆ ಸದಸ್ಯರನ್ನು ಆರಿಸುತ್ತದೆ.



ಎರಡನೆಯ ಮುಖ್ಯ ಸಂಸ್ಥೆಯೆಂದರೆ ರಾಷ್ಟ್ರೀಯ ಯೋಜನೆಯ ಆಯೋಗ. ಈ ಸಂಸ್ಥೆಯು ದೇಶದಲ್ಲಿ ನಡೆಯಬೇಕಾದ ಅಭಿವೃದ್ಧಿಯ ನಕ್ಷೆಯನ್ನು ಸಿದ್ಧಗೊಳಿಸುತ್ತದೆ. ಪಂಚವಾರ್ಷಿಕ ಯೋಜನೆಗಳನ್ನು ಇದು ತಯಾರಿಸುತ್ತದೆ. ಈ ಯೋಜನೆಗಳ ಪ್ರಕಾರ ರಾಜ್ಯ ಸರಕಾರಗಳು ಮತ್ತು ಕೇಂದ್ರ ಸರಕಾರ ಇವು ಅಭಿವೃದ್ಧಿಯ ಕಾರ್ಯಕ್ರಮಗಳನ್ನು ಜಾರಿಗೆ ತರುತ್ತವೆ.

ರಾಷ್ಟ್ರದ ಹಣಕಾಸಿನ ವ್ಯವಸ್ಥೆಯನ್ನು ನೋಡಿಕೊಳ್ಳಲು ಭಾರತೀಯ ರಿಜರ್ವ್ ಬ್ಯಾಂಕ್ ಇದೆ. ರಾಷ್ಟ್ರದಲ್ಲಿ ಹಣದ ವ್ಯವಹಾರಗಳನ್ನು ಇದು ವ್ಯವಸ್ಥೆಗೊಳಿಸುತ್ತದೆ. ದೇಶದಲ್ಲಿರುವ ವಿವಿಧ ಬ್ಯಾಂಕುಗಳ ವ್ಯವಹಾರದ ಮೇಲೆ ಈ ಸಂಸ್ಥೆಯು ಹತೋಟಿಯನ್ನು ಇಟ್ಟುಕೊಂಡಿದೆ.



## ೪. ಸರಕಾರದ ಕೆಲಸ

ಸರಕಾರವು ಒಂದು ರಾಜಕೀಯ ಸಂಸ್ಥೆ. ಸಾಮಾನ್ಯವಾಗಿ ಇದು ನಾಗರಿಕರ ಹಕ್ಕುಗಳನ್ನು, ಜೀವವನ್ನು ಮತ್ತು ಆಸ್ತಿಯನ್ನು ರಕ್ಷಣೆ ಮಾಡುತ್ತದೆ.

ಜನರಿಗೆ ಆಗುವ ಅನ್ಯಾಯಗಳನ್ನು ತಡೆಯುತ್ತದೆ. ಅವುಗಳ ಪರಿಹಾರಕ್ಕೆ ಪ್ರಯತ್ನಿಸುತ್ತದೆ. ಜನರ ಜೀವನವು ಸುಖಮಯವಾಗಿರುವಂತೆ ಅಭಿವೃದ್ಧಿಯ ಕಾರ್ಯ ಕ್ರಮಗಳನ್ನು ಹಮ್ಮಿಕೊಳ್ಳುತ್ತದೆ.

ಸರಕಾರವು ತನ್ನ ಉದ್ದೇಶಗಳನ್ನು ನೆರವೇರಿಸಲು ಅನೇಕ ಕ್ರಮಗಳನ್ನು ಕೈಗೊಳ್ಳುತ್ತದೆ. ಜನರ ರಕ್ಷಣೆಗಾಗಿ ಪೋಲೀಸು ಮತ್ತು ಮಿಲಿಟರಿ ದಳಗಳನ್ನು ಕಟ್ಟುತ್ತದೆ. ಸಮಾಜವು ವ್ಯವಸ್ಥಿತವಾಗಿರುವಂತೆ ಅನೇಕ ಕಾನೂನುಗಳನ್ನು ಜಾರಿಗೆ ತರುತ್ತದೆ. ಅನಾಹುತಗಳು ಆದಾಗ ಪರಿಹಾರಗಳನ್ನು ಒದಗಿಸಲು ಮತ್ತು ಅಭಿವೃದ್ಧಿಯನ್ನು ಸಾಧಿಸಲು ಬೇಕಾದ ಹಣವನ್ನು ಸಜ್ಜುಗೊಳಿಸುತ್ತದೆ. ತನ್ನ ಕಾರ್ಯಕ್ಕೆ ಬೇಕಾದ ಹಣವನ್ನು ಸಂಗ್ರಹಿಸಲು ನಾನಾ ರೀತಿಯ ಕಂದಾಯ ಅಥವಾ ತೆರಿಗೆಗಳನ್ನು ಹಾಕುತ್ತದೆ.

ಸರಕಾರದ ಕೆಲಸವನ್ನು ಸರಾಗವಾಗಿ ನಡೆಸಲು ಅನೇಕ ಇಲಾಖೆಗಳನ್ನು ಸ್ಥಾಪಿಸಲಾಗಿದೆ. ಸರಕಾರದ ಬೊಕ್ಕಸಕ್ಕೆ ಹಣ ಬೇಕಾಗುತ್ತದೆ. ಇದಕ್ಕಾಗಿ ವಿವಿಧ ರೀತಿಯ ತೆರಿಗೆಗಳನ್ನು ಹಾಕಿ, ಹಣವನ್ನು ಸಂಗ್ರಹಿಸಲಾಗುವುದು. ಇದಕ್ಕಾಗಿಯೇ ತೆರಿಗೆಯ ಇಲಾಖೆ ಇರುತ್ತದೆ. ಹಣಕಾಸಿನ ವ್ಯವಹಾರವನ್ನು ನೋಡಿಕೊಳ್ಳಲು ಹಣಕಾಸಿನ ಇಲಾಖೆ ಇರುತ್ತದೆ. ವರ್ಷಕ್ಕೆ ಬರುವ ಆದಾಯ ಮತ್ತು ಆಗುವ ಖರ್ಚಿನ ವಿವರಗಳನ್ನು ಸಿದ್ಧಗೊಳಿಸಿ ಬಜೆಟ್ ತಯಾರಿಸಲಾಗುತ್ತದೆ. ಹಣಕಾಸಿನ ಆದಾಯ - ವೆಚ್ಚದ ಮೇಲೆ ಹತೋಟಿ ಇಟ್ಟುಕೊಳ್ಳಲು ಲೆಕ್ಕಪತ್ರ ಇಲಾಖೆ ಇರುತ್ತದೆ. ಜಮಾ-ಖರ್ಚಿನ ತಪಾಸಣೆಯನ್ನು ಮಾಡಿ ಗುಣದೋಷಗಳನ್ನು ಇದು ಎತ್ತಿ ತೋರಿಸುತ್ತದೆ. ಭೂಮಿಯ ಅಳತೆ ಮಾಡುವ, ಅದರ ನಿರ್ವಹಣೆ ಮಾಡುವ ಭೂ-ಕಂದಾಯ ಇಲಾಖೆಯನ್ನು ಸ್ಥಾಪಿಸಲಾಗಿದೆ. ಒಕ್ಕಲುತನವು ಪುರಾತನವಾದ ಉದ್ಯೋಗ. ಇದರ ಬಗ್ಗೆ ಹೆಚ್ಚು ಗಮನ ನೀಡಬೇಕಾಗಿದೆ. ಇದಕ್ಕೆಂದೇ ವ್ಯವಸಾಯ ಅಥವಾ ಕೃಷಿ ಇಲಾಖೆಯು ಕಾರ್ಯನಿರತವಾಗಿರುತ್ತದೆ. ಬೆಳೆಗೆ ಬೇಕಾದ ನೀರನ್ನು ಒದಗಿಸುವ ಕೆಲಸವನ್ನು ನೀರಾವರಿ ಇಲಾಖೆಯು ನೋಡಿಕೊಳ್ಳುತ್ತದೆ. ಜನರು ನಾನಾ ರೀತಿಯ ಕೈಗಾರಿಕೆಗಳಲ್ಲಿ ತೊಡಗಿರುತ್ತಾರೆ. ಮನೆಮನೆಗಳಲ್ಲಿ ಕೈಗಾರಿಕೆ ಇರುತ್ತದೆ.

ಕಾರ್ಖಾನೆಗಳಲ್ಲಿ ವಸ್ತುಗಳನ್ನು ಉತ್ಪಾದನೆ ಮಾಡಲಾಗುತ್ತದೆ. ಸಣ್ಣ ಪ್ರಮಾಣದಲ್ಲಿ ಮತ್ತು ದೊಡ್ಡ ಪ್ರಮಾಣದಲ್ಲಿ ವಸ್ತುಗಳನ್ನು ಉತ್ಪಾದಿಸಲಾಗುತ್ತದೆ. ಉತ್ಪಾದನೆಗೆ ಬೇಕಾದ ಕಚ್ಚಾ ವಸ್ತುಗಳನ್ನು ಒದಗಿಸಬೇಕು; ಯಂತ್ರಗಳನ್ನು ತಯಾರಿಸಬೇಕು; ಉತ್ಪಾದನೆಯನ್ನು ಹೇಗೆ ಮಾಡಬೇಕು ಎಂಬ ತಿಳಿವಳಿಕೆಯನ್ನು ನೀಡಬೇಕು; ಉತ್ಪಾದನೆಯಾದ ವಸ್ತುಗಳನ್ನು ಸರಿಯಾಗಿ ಜೋಡಿಸಿ ಇರಿಸಬೇಕು; ಬಳಕೆದಾರರಿಗೆ ಅವುಗಳನ್ನು ಒದಗಿಸಬೇಕು. ಇಂತಹ ಅನೇಕ ವಿಷಯಗಳಿಗೆ ಸಂಬಂಧಿಸಿದಂತೆ ಔದ್ಯೋಗಿಕ ವ್ಯವಹಾರದ ಇಲಾಖೆ ಇರುತ್ತದೆ. ವಸ್ತುಗಳ ಸಂಗ್ರಹ, ಹಂಚಿಕೆ, ಮುಂತಾದವುಗಳನ್ನು ನೋಡಿಕೊಳ್ಳಲು ವಾಣಿಜ್ಯ ಇಲಾಖೆ ಇರುತ್ತದೆ.

ವಸ್ತುಗಳನ್ನು, ದನಕರುಗಳನ್ನು ಮತ್ತು ಮನುಷ್ಯರನ್ನು ಒಂದು ಸ್ಥಳದಿಂದ ಇನ್ನೊಂದು ಸ್ಥಳಕ್ಕೆ ಸಾಗಿಸಲು ವಾಹನ ಸವಲತ್ತುಗಳು ಬೇಕಾಗುತ್ತವೆ. ಪೂರ್ವಕಾಲದಲ್ಲಿ ಮನುಷ್ಯನೇ ತನ್ನ ತಲೆಯ ಮೇಲೆ ಹೊತ್ತುಕೊಂಡೋ, ಪ್ರಾಣಿಗಳ ಬೆನ್ನಮೇಲೆ ಹೇರಿಕೊಂಡೋ ಸಾಮಾನುಗಳನ್ನು ಸಾಗಿಸುತ್ತಿದ್ದ. ಕ್ರಮೇಣ ಬಂಡಿಯನ್ನು ಕಂಡು ಹಿಡಿದು ಅದರ ಮೇಲೆ ವಸ್ತುಗಳನ್ನು ಸಾಗಿಸತೊಡಗಿದ. ಈಗ ನಾನಾ ನಮೂನೆಯ ವಾಹನಗಳು ಇವೆ. ಸೈಕಲ್ಲುಗಳು, ಮೋಟಾರ್ ಸೈಕಲ್ಲುಗಳು, ಸ್ಕೂಟರ್‌ಗಳು, ಕಾರುಗಳು, ಟ್ರಕ್ಕುಗಳು, ವ್ಯಾನುಗಳು, ಬಸ್ಸುಗಳು, ರೈಲುಗಾಡಿಗಳು, ವಿಮಾನಗಳು, ಹಡಗುಗಳು, ದೋಣಿಗಳು, ಮುಂತಾದವುಗಳೆಲ್ಲಾ ಇವೆ. ಮನುಷ್ಯ ಶಕ್ತಿಯಿಂದ ಆರಂಭವಾಗಿ, ಪ್ರಾಣಿಶಕ್ತಿಯನ್ನು ಉಪಯೋಗಿಸುತ್ತಾ ಈಗೀಗ ಕಲ್ಲಿದ್ದಲು, ಪೆಟ್ರೋಲು, ಡೀಸೆಲ್, ವಿದ್ಯುತ್, ಅಣುಶಕ್ತಿ ಇತ್ಯಾದಿ ಇಂಧನಗಳನ್ನು ಬಳಸಿಕೊಂಡು ವಾಹನಗಳನ್ನು ನಡೆಸಲಾಗುತ್ತಿದೆ. ಸಾರಿಗೆಗೆ ಸಂಬಂಧಿಸಿದ ವ್ಯವಹಾರಗಳನ್ನು ನೋಡಿಕೊಳ್ಳಲು ಸಾರಿಗೆ ಇಲಾಖೆಯನ್ನು ಸರಕಾರವು ನಡೆಸುತ್ತಿದೆ.

ವಸ್ತುಗಳನ್ನು, ಪ್ರಾಣಿಗಳನ್ನು ಮತ್ತು ಮನುಷ್ಯರನ್ನು ಮಾತ್ರವೇ ಸಾಗಿಸಿದರೆ ಸಾಕಾಗುವುದಿಲ್ಲ. ಸುದ್ದಿಗಳನ್ನೂ ರವಾನಿಸಬೇಕು. ಇದಕ್ಕಾಗಿಯೇ ಅನೇಕ ರೀತಿಯ ವ್ಯವಸ್ಥೆಗಳನ್ನು ಮಾಡಲಾಗಿದೆ. ಅಂಚೆ, ತಂತಿ, ನಿರ್‌ತಂತಿ (ವೈರ್‌ಲೆಸ್) ದೂರವಾಣಿ, ಆಕಾಶವಾಣಿ, ದೂರದರ್ಶನ, ಮುಂತಾದ ವಿಧಾನಗಳನ್ನು ರೂಪಿಸಿ,

ಉಪಯೋಗಿಸಲಾಗುತ್ತಿದೆ. ಇಂಥ ಕಾರ್ಯಗಳನ್ನು ನೋಡಿಕೊಳ್ಳಲು ಒಂದು ಇಲಾಖೆಯೇ ಇರುತ್ತದೆ. ಇದನ್ನು ಸಂಪರ್ಕ ಸಂವಹನ ಇಲಾಖೆ ಎಂದು ಕರೆಯಲಾಗುವುದು.

ಮನುಷ್ಯನು ಮುಖ್ಯವಾಗಿ ಮನಸ್ಸು ಮತ್ತು ಬುದ್ಧಿಶಕ್ತಿ ಉಳ್ಳವನು. ಇವನು ಅಕ್ಷರವನ್ನು ಕಲಿಯಲು ಸಮರ್ಥನು. ಇವನ ಸಾಮರ್ಥ್ಯವು ಅಭಿವೃದ್ಧಿಗೊಳ್ಳಬೇಕು. ಇವನು ಚಿಂತನೆ ಮಾಡುತ್ತಾನೆ. ತನ್ನ ಆಲೋಚನೆಗಳನ್ನು, ಊಹೆಗಳನ್ನು, ಭಾವನೆಗಳನ್ನು, ಕಲ್ಪನೆಗಳನ್ನು, ಅನುಭವಗಳನ್ನು, ಆಗಿ ಹೋದ ಘಟನೆಗಳನ್ನು, ಹೀಗೆಯೇ ಅನೇಕ ಸಂಗತಿಗಳನ್ನು ದಾಖಲು ಮಾಡುತ್ತಾನೆ. ಇವನಿಗೆ ಬರೆಯುವ ಶಕ್ತಿ ಇರುವುದರಿಂದಲೇ ಇದು ಸಾಧ್ಯವಾಗುತ್ತದೆ. ಇವನು ಬಾಲ್ಯದಿಂದಲೇ ಕಲಿಯುತ್ತಾನೆ. ಇವನು ಕಲಿಯಲಿಕ್ಕೆ ನೆರವು ಬೇಕು. ಮನುಷ್ಯನು ನಾನಾ ವಿಷಯಗಳನ್ನು ಕಲಿಯಬೇಕು. ಇದರಲ್ಲಿ ಇವನಿಗೆ ವಿವಿಧ ರೀತಿಯ ಸಹಾಯ - ಸಹಕಾರ-ಮಾರ್ಗದರ್ಶನ ಬೇಕಾಗುತ್ತದೆ. ಈ ಎಲ್ಲ ವಿಷಯಗಳನ್ನು ನೋಡಿಕೊಳ್ಳಲು ಒಂದು ವ್ಯವಸ್ಥೆಯೇ ಇದೆ. ಇದಕ್ಕೆ ಶಿಕ್ಷಣ ಇಲಾಖೆ ಎನ್ನಲಾಗುತ್ತದೆ.

ಶಿಕ್ಷಣಕ್ಕೆ ತೀರಾ ಹತ್ತಿರವಾಗಿರುವುದು ವಿಜ್ಞಾನ ಇಲಾಖೆ. ಮನುಷ್ಯನಲ್ಲಿ ವೈಜ್ಞಾನಿಕ ಮನೋಭಾವ ಇರುತ್ತದೆ. ಇದನ್ನು ವರ್ಧಿಸಬೇಕು. ಪುರಾತನ ಕಾಲದಿಂದಲೂ ಸಂಗ್ರಹಗೊಂಡ ವೈಜ್ಞಾನಿಕ ಜ್ಞಾನವನ್ನು ಸರಿಯಾದ ರೀತಿಯಲ್ಲಿ ಕಾಪಾಡಿಕೊಂಡು ಹೋಗಬೇಕು. ಹೊಸ ಹೊಸ ವಿಷಯಗಳನ್ನು ಕಂಡುಹಿಡಿಯಬೇಕು. ಇದಕ್ಕಾಗಿ ವಿವಿಧ ರೀತಿಯ ಸಲಕರಣೆಗಳು ಬೇಕಾಗುತ್ತವೆ; ಅನೇಕ ವಿಜ್ಞಾನಿಗಳ ಸಹಕಾರ ಬೇಕಾಗುತ್ತದೆ. ಮನುಷ್ಯನ ಜೀವನವು ಸರಾಗವಾಗಿ ನಡೆಯಲು ಬೇಕಾದ ಎಲ್ಲ ಸವಲತ್ತುಗಳನ್ನು ವಿಜ್ಞಾನದಿಂದ ಪಡೆಯಲು ಸಾಧ್ಯ. ಆದುದರಿಂದಲೇ ಸರಕಾರವು ವಿಜ್ಞಾನ ಇಲಾಖೆಯನ್ನು ನಡೆಸುತ್ತದೆ.

ಮನುಷ್ಯನ ಜೀವವು ಬಹು ಅಮೂಲ್ಯವಾದದ್ದು. ಅವನ ಆಸ್ತಿಯೂ ಅಷ್ಟೇ ಮುಖ್ಯವಾದದ್ದು. ಅವನ ಬದುಕು ಸುರಕ್ಷಿತವಾಗಿರಬೇಕು. ಅವನ ಪ್ರಾಣಕ್ಕೆ

ಮತ್ತು ಸ್ವತ್ತಿಗೆ ಅಪಾಯ ಆಗದಂತೆ ರಕ್ಷಣೆ ನೀಡಲು ಸಿಬ್ಬಂದಿಯು ಬೇಕಾಗುತ್ತದೆ. ವಿವಿಧ ಹಂತದ ಪೋಲೀಸ್ ಸಿಬ್ಬಂದಿಯನ್ನು ಇದಕ್ಕಾಗಿಯೇ ನೇಮಿಸಲಾಗುತ್ತದೆ. ಸಮಾಜದಲ್ಲಿ ನಡೆಯುವ ಕಳ್ಳತನ, ಮೋಸ, ವಂಚನೆ, ದರೋಡೆ, ಭ್ರಷ್ಟಾಚಾರ, ಮುಂತಾದವುಗಳನ್ನು ತಡೆಗಟ್ಟಲು, ತಪ್ಪಿಸಲು, ಪರಿಹರಿಸಲು ಸರಕಾರವು ಒಂದು ಇಲಾಖೆಯನ್ನು ನಡೆಸುತ್ತದೆ. ಇದನ್ನು ಗೃಹ ಇಲಾಖೆ ಎನ್ನಲಾಗುತ್ತದೆ. ಇದಕ್ಕೆ ಸೇರಿದಂತೆಯೇ ಸೆರೆಮನೆಗಳನ್ನು ಅಥವಾ ಬಂದೀಖಾನೆಗಳನ್ನು ನಡೆಸಲು ಇನ್ನೊಂದು ಇಲಾಖೆಯನ್ನು ಸರಕಾರವು ವ್ಯವಸ್ಥೆ ಮಾಡಿದೆ. ಇದಕ್ಕೆ ಸೆರೆಮನೆ ಇಲಾಖೆ ಎನ್ನಲಾಗುತ್ತದೆ.

ಜನರಿಗೆ ಬೇಕಾದ ರಸ್ತೆಗಳನ್ನು ಮಾಡಲು ಮತ್ತು ಅವುಗಳ ದುರಸ್ತಿಯನ್ನು ನೋಡಿಕೊಳ್ಳಲು, ಸರಕಾರಕ್ಕೆ ಬೇಕಾದ ಕಟ್ಟಡಗಳನ್ನು ಕಟ್ಟಲು, ನೀರಾವರಿಗೆ ಬೇಕಾದ ಕೆರೆ-ಕಾಲುವೆಗಳನ್ನು ಮತ್ತು ಅಣೆಕಟ್ಟುಗಳನ್ನು ನಿರ್ಮಿಸಲು ಒಂದು ಇಲಾಖೆಯೇ ಬೇಕಾಗುತ್ತದೆ. ಇದನ್ನು ಲೋಕೋಪಯೋಗಿ ಇಲಾಖೆ ಎಂದು ಕರೆಯಲಾಗುತ್ತದೆ.

ಮನುಷ್ಯನಿಗೆ ಆಹಾರ ಬೇಕು, ಆರೋಗ್ಯ ಇರಬೇಕು. ಇದಕ್ಕಾಗಿಯೇ ಸರಕಾರದಲ್ಲಿ ಆರೋಗ್ಯ ಇಲಾಖೆ ಇದೆ. ಪರಿಸರವು ನಿರ್ಮಲವಾಗಿದ್ದರೆ ಜನರ ಆರೋಗ್ಯವು ಸರಿಯಾಗಿ ಇರುತ್ತದೆ. ಅದಕ್ಕಾಗಿಯೇ ಪರಿಸರ ಇಲಾಖೆಯೂ ಇದೆ. ಪರಿಸರಕ್ಕೆ ಹೊಂದಿಕೊಂಡಿರುವುದೇ ಗುಡ್ಡಗಾಡುಗಳು, ಅರಣ್ಯಗಳು. ಇವುಗಳ ನಿರ್ವಹಣೆಗಾಗಿಯೇ ಅರಣ್ಯ ಇಲಾಖೆ ಇರುತ್ತದೆ.

ಮನುಷ್ಯನು ಬದುಕುತ್ತಿರುವುದು ತಿನ್ನಲಿಕ್ಕಾಗಿ ಅಲ್ಲ, ಅವನು ತಿನ್ನುತ್ತಿರುವುದು ಬದುಕಲಿಕ್ಕಾಗಿ. ಹೀಗೆ ಒಂದು ನಾಡನುಡಿ ಇದೆ. ಅಂದರೆ ಮನುಷ್ಯನು ಕಲೆ, ಸಾಹಿತ್ಯ, ಮನೋರಂಜನೆ ಇತ್ಯಾದಿಗಳ ಅನುಕೂಲಗಳನ್ನು ಪಡೆಯಬೇಕು. ಇಂಥ ಸಂಗತಿಗಳನ್ನು ನೋಡಿಕೊಳ್ಳಲು ಸಂಸ್ಕೃತಿ ಇಲಾಖೆ, ಮನೋರಂಜನೆಯ ಇಲಾಖೆ, ಗ್ರಂಥಾಲಯ ಇಲಾಖೆ, ವಿವಿಧ ಅಕಾಡೆಮಿಗಳ

ಇಲಾಖೆ, ಸರಕಾರದಲ್ಲಿ ಇರುತ್ತವೆ.

ದೇಶವು ಒಳಗೂ ಸುರಕ್ಷಿತವಾಗಿರಬೇಕು, ಹೊರಗಿನಿಂದಲೂ ರಕ್ಷಣೆ ಪಡೆದಿರಬೇಕು. ಇದಕ್ಕಾಗಿಯೇ ನೆಲದ ಮೇಲೆ, ನೀರಿನ ಮೇಲೆ, ಆಕಾಶದಲ್ಲಿ ಸೈನಿಕರು ಇರಬೇಕಾಗುತ್ತದೆ. ಈ ಮೂರೂ ವಿಧದ ಸೇನಾ ಬಲವನ್ನು ಸದಾ ಕಾಪಾಡಿಕೊಂಡು ಬರಬೇಕು. ವೈರಿಗಳು ನಮ್ಮ ಮೇಲೆ ದಾಳಿ ಮಾಡಿದರೆ ನಮ್ಮ ಸೇನಾಪಡೆಗಳು ನಮ್ಮ ಗಡಿಗಳನ್ನು ರಕ್ಷಿಸುತ್ತವೆ. ಇಂಥ ರಕ್ಷಣೆಯನ್ನು ನಿರಂತರವೂ ಒದಗಿಸಲು ಸರಕಾರದ ರಕ್ಷಣಾ ಇಲಾಖೆಯು ಸದಾ ಸಿದ್ಧವಾಗಿರುತ್ತದೆ.

ಮನುಷ್ಯನು ಹುಟ್ಟಿದಂದಿನಿಂದ ಸಾಯುವವರೆಗೂ ಒಂದಲ್ಲಾ ಒಂದು ಸಮಸ್ಯೆಯಿಂದ ತೊಂದರೆಗೆ ಒಳಗಾಗುತ್ತಾನೆ. ವೈಯಕ್ತಿಕ ಕಷ್ಟಗಳಿರುತ್ತವೆ; ಕುಟುಂಬದಲ್ಲಿ ಸಮಸ್ಯೆಗಳಿರುತ್ತವೆ; ಸಮುದಾಯದಲ್ಲಿ ತೊಂದರೆಗಳಿರುತ್ತವೆ. ನಾನಾ ಕಾರಣಗಳಿಗಾಗಿ ಮಕ್ಕಳು, ಯುವಕರು, ಮಹಿಳೆಯರು, ಹಿಂದುಳಿದವರು, ವೃದ್ಧರು ಸಂಕಷ್ಟದಲ್ಲಿ ಇರುತ್ತಾರೆ. ಇವರ ದೇಹಕ್ಕೆ ರೋಗ ತಗಲಿರಬಹುದು, ಮನಸ್ಸಿಗೆ ಅಘಾತ ಆಗಿರಬಹುದು, ವೈಧವ್ಯ ಬಂದಿರಬಹುದು, ಗಂಡನಿಂದ ಕಿರುಕುಳ ಆಗುತ್ತಿರಬಹುದು, ಕಳ್ಳತನದಿಂದ ಸಿಕ್ಕಿ ಹಾಕಿಕೊಂಡಿರಬಹುದು, ನಿರ್ಲಕ್ಷ್ಯಗೆ ಒಳಗಾಗಿರಬಹುದು, ಮನೆ-ಮಠಗಳಿಲ್ಲದೆ ಅಲೆಯುತ್ತಿರಬಹುದು, ಉದ್ಯೋಗವಿಲ್ಲದೆ ಬಳಲುತ್ತಿರಬಹುದು, ಅನೈತಿಕ ವ್ಯವಹಾರದಿಂದ ಸಂಕಷ್ಟಕ್ಕೆ ಸಿಕ್ಕಿರಬಹುದು, ಶೋಷಣೆಗೆ ಒಳಗಾಗಿರಬಹುದು, ಜಾತಿದ್ವೇಷಕ್ಕೆ ಬಲಿಯಾಗಿರಬಹುದು, ವಿಚ್ಛೇದನದಿಂದ ಆಶ್ರಯವಿಲ್ಲದಿರಬಹುದು, ರಕ್ಷಣೆಯಿಲ್ಲದೆ ಸೊರಗುತ್ತಿರಬಹುದು. ಹೀಗೆ ವಿವಿಧ ತೊಂದರೆಗಳಿಂದ ಬಳಲುತ್ತಿರವ ಜನರಿಗೆ ಅನುಕೂಲಗಳನ್ನು ಒದಗಿಸಲಿಕ್ಕಾಗಿಯೇ ಸಮಾಜ ಕಲ್ಯಾಣ ಇಲಾಖೆ, ಪರಿಶಿಷ್ಟಜಾತಿ ಮತ್ತು ಪರಿಶಿಷ್ಟ ಬುಡಕಟ್ಟು ಇಲಾಖೆ, ಮಹಿಳೆಯರ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆ, ಸಮುದಾಯ ಅಭಿವೃದ್ಧಿ ಇಲಾಖೆ, ಗ್ರಾಮೀಣ ಅಭ್ಯುದಯ ಇಲಾಖೆ ಮುಂತಾದ ಇಲಾಖೆಗಳು ಕಾರ್ಯ ಮಾಡುತ್ತವೆ.

ಜನರು ಗುಂಪಿನಲ್ಲಿ ಜೀವಿಸುತ್ತಿರುವುದರಿಂದ ಪರಸ್ಪರವಾಗಿ ಸಹಕಾರದಿಂದ ಇರಬೇಕು. ದುಡಿಯುವಾಗ, ಸಂಗ್ರಹಿಸುವಾಗ, ಉಳಿಸುವಾಗ, ಬಳಸುವಾಗ ಎಲ್ಲರ

ನೆರವು-ಸಹಾಯ-ಸಹಕಾರ ಬೇಕಾಗುತ್ತದೆ. ಇಂಥ ಸಂಗತಿಗಳನ್ನು ನೋಡಿಕೊಳ್ಳಲು ಸಹಕಾರ ಇಲಾಖೆಯೂ ಸರಕಾರದಲ್ಲಿ ಇರುತ್ತದೆ.

ಒಟ್ಟಿನಲ್ಲಿ ನಮ್ಮ ಜೀವನವು ಸಮಾಜದಲ್ಲಿ ಸೊಗಸಾಗಿ ಇರಬೇಕಾದರೆ ಎಲ್ಲ ರೀತಿಯ ರಕ್ಷಣೆಯು ನಮಗೆ ಬೇಕಾಗುತ್ತದೆ. ತೊಂದರೆಗಳು ಉಂಟಾಗದಂತೆ ನೋಡಿಕೊಳ್ಳಲು, ಅಂಥ ಸಮಸ್ಯೆಗಳು ಒದಗಿದಾಗ ಅವುಗಳನ್ನು ಪರಿಹರಿಸಲು ವಿವಿಧ ರೀತಿಯ ವ್ಯವಸ್ಥೆಗಳು ಇರಬೇಕಾಗುತ್ತದೆ. ಇಂಥ ವ್ಯವಸ್ಥೆಯನ್ನು ಏರ್ಪಡಿಸುವುದು ಸರಕಾರದ ಕರ್ತವ್ಯ ಮತ್ತು ಹೊಣೆ. ಇದಕ್ಕಾಗಿಯೇ ಅದು ನಾನಾ ರೀತಿಯ ಇಲಾಖೆಗಳನ್ನು ಸ್ಥಾಪಿಸಿ, ನಡೆಸುತ್ತದೆ.

ಇಲಾಖೆಗಳು ಬೇರೆ ಬೇರೆ ಎಂದು ಕಂಡುಬಂದರೂ ಇವು ಪರಸ್ಪರವಾಗಿ ಸಂಬಂಧ ಹೊಂದಿವೆ. ಒಂದನ್ನು ಬಿಟ್ಟು ಇನ್ನೊಂದು ಸ್ವತಂತ್ರವಾಗಿ ಕಾರ್ಯ ಮಾಡಲು ಆಗುವುದಿಲ್ಲ. ಆದುದರಿಂದಲೇ ಇವುಗಳ ಒಳಗೆ ಸಂಬಂಧ ಇರಲೇ ಬೇಕಾಗುತ್ತದೆ. ಇವೆಲ್ಲವೂ ಪರಸ್ಪರವಾಗಿ ಸಹಕಾರದಿಂದ ಕೆಲಸ ಮಾಡಬೇಕು. ಇಂಥ ಕೆಲಸಕ್ಕೆ ಸಂಯೋಜಿತ ಕೆಲಸ ಅನ್ನುತ್ತಾರೆ.

ಸರಕಾರದ ಕೆಲಸಗಳಿಗೆ ಮಾರ್ಗದರ್ಶನವನ್ನು ನೀಡಲು, ಶಾಸನಾಂಗವು ಇದ್ದರೆ, ಸರಕಾರದ ಕೆಲಸಗಳನ್ನು ಸರಿಯಾಗಿ ನಡೆಸಲು ಕಾರ್ಯಾಂಗವು ಇರುತ್ತದೆ. ಸರಕಾರದ ಕೆಲಸ ಹದಗೆಟ್ಟಾಗ ಅದನ್ನು ಸರಿಪಡಿಸಲು ನ್ಯಾಯಾಂಗವು ಇರುತ್ತದೆ.

ಸರಕಾರದ ಕೆಲಸಗಳನ್ನು ನೋಡಿಕೊಳ್ಳಲು ಮಂತ್ರಿಮಂಡಲ ಇರುತ್ತದೆ. ಬೇರೆ ಬೇರೆ ಇಲಾಖೆಗಳನ್ನು ನೋಡಿಕೊಳ್ಳಲು ಬೇರೆ ಬೇರೆ ಮಂತ್ರಿಗಳು ಇರುತ್ತಾರೆ. ಈ ಮಂತ್ರಿಗಳಿಗೆ ನೆರವಾಗಲು ಸರಕಾರದ ಕಾರ್ಯದರ್ಶಿಗಳು ಮತ್ತು ಇತರ ಸಿಬ್ಬಂದಿ ವರ್ಗದವರು ಇರುತ್ತಾರೆ. ಇಲಾಖೆಗಳಲ್ಲಿ ಸೂಕ್ತವಾಗಿ ತರಬೇತಿ ಪಡೆದ ಜನರನ್ನು ನೇಮಿಸಿಕೊಳ್ಳಲಾಗುತ್ತದೆ. ನೇಮಕಾತಿ ಮಾಡಲು ಮತ್ತು ಅವರ ಸೇವೆಯ ನಿಯಮಾವಳಿಗಳನ್ನು ನೋಡಿಕೊಳ್ಳಲು ವ್ಯವಸ್ಥೆಗಳೂ ಇರುತ್ತದೆ.



ಕರ್ನಾಟಕ ಉಚ್ಚ ನ್ಯಾಯಲಯ

ಸರಕಾರದ ವೈವಿಧ್ಯಮಯವಾದ ಈ ಕೆಲಸಗಳ ಪರಿಚಯವು ನಮಗೆ ಆಗಬೇಕು. ಇವು ಹೇಗೆ ನಿರ್ವಹಣೆಗೊಳ್ಳುತ್ತವೆ ಎಂಬುದನ್ನೂ ನಾವು ತಿಳಿದುಕೊಳ್ಳಬೇಕು. ಈ ಕೆಲಸದಲ್ಲಿ ನಾವು ಹೇಗೆ ಪಾಲುಗೊಳ್ಳಬೇಕು ಎಂಬುದನ್ನೂ ನಾವು ಅರಿತುಕೊಳ್ಳಬೇಕು.

## ೫. ಸರಕಾರದಲ್ಲಿ ನಮ್ಮ ಪಾತ್ರ

ನಾವು ಮನುಷ್ಯರು. ನಮಗೆ ನಮ್ಮದೇ ಆದ ಒಂದು ಸಮಾಜ ಇದೆ. ಈ ಸಮಾಜದಲ್ಲಿ ನಾವು ಬದುಕುತ್ತಾ ಇದ್ದೇವೆ. ನಾವು ವಿವಿಧ ಗುಂಪುಗಳಲ್ಲಿ

ಹಿಂಗಡಣೆ ಹೊಂದಿದ್ದೇವೆ. ಸಮುದಾಯಗಳಲ್ಲಿ ಜೀವಿಸುತ್ತಿದ್ದೇವೆ. ನಮಗೆ ವಿವಿಧ ರೀತಿಯ ವ್ಯವಹಾರಗಳಿವೆ. ಈ ವ್ಯವಹಾರಗಳಲ್ಲಿ ರಾಜಕೀಯ ವ್ಯವಹಾರವೂ ಒಂದು. ರಾಜಕೀಯ ವ್ಯವಹಾರದ ಒಂದು ಭಾಗವೇ ಸರಕಾರ. ಸಮಾಜದ ಒಂದು ಅಂಶ ರಾಜಕೀಯ. ರಾಜಕೀಯದ ಒಂದು ಅಂಶ ಸರಕಾರ. ಆದರೂ ರಾಜಕೀಯವು ಒಂದು ಮಹತ್ವದ ಅಂಶ. ಅದರಂತೆಯೇ ಸರಕಾರವೂ ಒಂದು ಪ್ರಮುಖವಾದ ಅಂಶ. ನಾವು ರಾಜಕೀಯದ ವ್ಯವಹಾರದಲ್ಲಿ ನಿರತರಾಗಿದ್ದೇವೆ. ಅದರಂತೆಯೇ ಸರಕಾರದ ಕಾರ್ಯಕಲಾಪಗಳಲ್ಲೂ ನಾವು ತೊಡಗಿರುತ್ತೇವೆ. ಸರಕಾರಕ್ಕೂ ನಮಗೂ ಇರುವುದು ಬ್ರಹ್ಮಗಂಟು. ಸಮಾಜವು ಸುವ್ಯವಸ್ಥಿತವಾಗಿ ಇರಬೇಕಾದರೆ ಸರಕಾರವು ಅಗತ್ಯ. ಆದರೆ, ಸರಕಾರವು ಒಳ್ಳೆಯ ರೀತಿಯಲ್ಲಿ ಕಾರ್ಯ ಮಾಡಿದರೆ ಮಾತ್ರವೇ ಇದು ಸಾಧ್ಯ. ಸರಕಾರವು ಸರಿಯಾಗಿ ಕೆಲಸ ಮಾಡಲು ನಾವೆಲ್ಲರೂ ಅದರ ಜೊತೆಗೆ ಸೇರಬೇಕು; ಅದರೊಡನೆ ಸಹಕರಿಸಿ ಕೆಲಸ ಮಾಡಬೇಕು.

ನಮ್ಮದು ಪ್ರಜಾಪ್ರಭುತ್ವ. ಅಂದರೆ, ಸರಕಾರವು ನಮ್ಮದೇ. ನಮ್ಮಿಂದಲೇ ಸರಕಾರವು ಹುಟ್ಟುತ್ತದೆ, ಬೆಳೆಯುತ್ತದೆ ಮತ್ತು ಕಾರ್ಯಮಾಡುತ್ತದೆ. ಪ್ರಜೆಗಳು ಇರದಿದ್ದರೆ ಸರಕಾರವು ಇರಲಿಕ್ಕೆ ಸಾಧ್ಯವಿಲ್ಲ. ಸರಕಾರಕ್ಕೆ ಒಂದು ಭೂಪ್ರದೇಶ ಬೇಕು; ಆ ಭೂಪ್ರದೇಶದಲ್ಲಿ ಜನರು ವಾಸಿಸುತ್ತಿರಬೇಕು; ಆ ಜನರು ಸಾಮಾಜಿಕ ಜೀವನವನ್ನು ನಡೆಸಿರುತ್ತಾರೆ; ಅವರೇ ಪ್ರಜೆಗಳು. ಆ ಪ್ರಜೆಗಳು ಒಂದು ರಾಜಕೀಯ ವ್ಯವಸ್ಥೆಯನ್ನು ಮಾಡಿಕೊಳ್ಳುತ್ತಾರೆ. ಆ ವ್ಯವಸ್ಥೆಯೇ ಸರಕಾರ. ಆ ಸರಕಾರಕ್ಕೆ ಅಧಿಕಾರ ಇರುತ್ತದೆ. ಆ ಅಧಿಕಾರದಿಂದ ಪ್ರಜೆಗಳ ದುಃಖವನ್ನು ನಿವಾರಿಸುತ್ತದೆ; ಸುಖ-ಸಂತೋಷದ ಜೀವನನ್ನು ನಡೆಸಲು ಅನುಕೂಲವನ್ನು ಮಾಡಿಕೊಡುತ್ತದೆ.

ಪ್ರಜಾಪ್ರಭುತ್ವದ ಸರಕಾರವನ್ನು ನಡೆಸಲು ರಾಜಕೀಯ ಪಕ್ಷಗಳು ಇರುತ್ತವೆ. ಚುನಾವಣೆಯಲ್ಲಿ ರಾಜಕೀಯ ಪಕ್ಷಗಳ ಸದಸ್ಯರು ಮತ್ತು ಕೆಲವು ಸ್ವತಂತ್ರರು ಸ್ಪರ್ಧಿಸುತ್ತಾರೆ. ಮತವನ್ನು ಚಲಾಯಿಸುವ ಅಧಿಕಾರ ಉಳ್ಳ ಜನರು ಚುನಾವಣೆಯಲ್ಲಿ ತಮ್ಮ ಮತವನ್ನು ನೀಡುತ್ತಾರೆ. ನಮ್ಮ ರಾಷ್ಟ್ರದಲ್ಲಿ ಹದಿನೆಂಟು ವರ್ಷವನ್ನು ಮೀರಿದ ಜನರು ಮತವನ್ನು ಚಲಾಯಿಸುವ ಹಕ್ಕು ಪಡೆದಿದ್ದಾರೆ.

ಸ್ಪರ್ಧಿಸಿದವರನ್ನು ಅಭ್ಯರ್ಥಿಗಳು ಎಂದು ಕರೆಯುತ್ತಾರೆ. ಯಾರಿಗೆ ಹೆಚ್ಚು ಮತಗಳು ದೊರೆಯುತ್ತವೆಯೊ ಅಂಥವರು ಜನರ ಪ್ರತಿನಿಧಿಗಳು ಆಗುತ್ತಾರೆ. ಅಂದರೆ, ನಮ್ಮಲ್ಲಿಯೇ ಕೆಲವರು ಚುನಾವಣೆಗೆ ನಿಲ್ಲುತ್ತಾರೆ; ಹಕ್ಕು ಪಡೆದವರು ಮತಗಳನ್ನು ಹಾಕುತ್ತಾರೆ; ಹೆಚ್ಚು ಮತಗಳನ್ನು ಗಳಿಸಿದವರು ನಮ್ಮ ಪ್ರತಿನಿಧಿಗಳು ಆಗುತ್ತಾರೆ.

ಆರಿಸಿಹೋದ ಪ್ರತಿನಿಧಿಗಳು ಸರಕಾರವನ್ನು ರಚಿಸುತ್ತಾರೆ. ಅಂದರೆ, ದೊಡ್ಡ ಸಂಖ್ಯೆಯನ್ನು ಪಡೆದ ರಾಜಕೀಯ ಪಕ್ಷವು ಸರಕಾರವನ್ನು ರಚಿಸುತ್ತದೆ. ಉಳಿದ ಪಕ್ಷಗಳು ಮತ್ತು ಸ್ವತಂತ್ರವಾಗಿ ಆರಿಸಿಬಂದವರು ಪ್ರತಿಪಕ್ಷಗಳಾಗಿ ಶಾಸನ ಸಭೆಗಳಲ್ಲಿ ಇರುತ್ತಾರೆ. ಆಳುವ ಪಕ್ಷವಾಗಲಿ, ಪ್ರತಿಪಕ್ಷಗಳಾಗಲಿ, ಸ್ವತಂತ್ರ ಸದಸ್ಯರಾಗಲಿ ಇವರೆಲ್ಲರೂ ನಮ್ಮ ಪ್ರತಿನಿಧಿಗಳೇ. ಪ್ರಜೆಗಳೆಲ್ಲರೂ ಶಾಸನ ಸಭೆಯಲ್ಲಿ ಇರಲು ಸಾಧ್ಯವಿಲ್ಲ.ಆದುದರಿಂದಲೇ ನಮ್ಮ ಪ್ರತಿನಿಧಿಗಳಾಗಿ ಆರಿಸಿಹೋದವರು ಅಲ್ಲಿ ಇರುತ್ತಾರೆ.

ಆರಿಸಲ್ಪಟ್ಟ ಪ್ರತಿನಿಧಿಗಳು ಗ್ರಾಮ ಪಂಚಾಯತಿಗಳಲ್ಲಿ, ತಾಲ್ಲೂಕು ಪಂಚಾಯತಿಗಳಲ್ಲಿ, ಜಿಲ್ಲಾ ಪಂಚಾಯತಿಗಳಲ್ಲಿ, ರಾಜ್ಯ ಶಾಸನಸಭೆಗಳಲ್ಲಿ, ರಾಷ್ಟ್ರದ ಸಂಸತ್ತಿನಲ್ಲಿ ಕಾರ್ಯ ಮಾಡುತ್ತಾರೆ. ಪಂಚಾಯತಿಗಳಾಗಲಿ, ರಾಜ್ಯ ಸರಕಾರಗಳಾಗಲಿ, ರಾಷ್ಟ್ರ ಸರಕಾರಗಳಾಗಲಿ, ಪ್ರಜೆಗಳ ಪ್ರತಿನಿಧಿಗಳಿಂದಲೇ ನಡೆಯುತ್ತವೆ. ಅಂದರೆ, ನಮ್ಮ ಪ್ರತಿನಿಧಿಗಳೇ ಸರಕಾರಗಳನ್ನು ನಡೆಸುತ್ತಾರೆ.

ಪ್ರಜೆಗಳ ಪ್ರತಿನಿಧಿಗಳು ಶಾಸನಾಂಗದ ಸದಸ್ಯರಾಗಿ ಜನರಿಗೆ ಅಗತ್ಯವಾದ ಶಾಸನಗಳನ್ನು ಮಾಡುತ್ತಾರೆ. ಅವರು ಮಾಡಿದ ಕಾನೂನುಗಳು ನಮ್ಮೆಲ್ಲರಿಗೂ ಅನ್ವಯಿಸುತ್ತವೆ. ಕಾನೂನುಗಳು ಮತ್ತು ನಿಯಮಾವಳಿಗಳು ನಮಗಾಗಿಯೇ ರೂಪಿತವಾಗಿರುವುದರಿಂದ ಅವುಗಳನ್ನು ನಾವು ನಮ್ಮ ಜೀವನದಲ್ಲಿ ಅಳವಡಿಸಿ ಕೊಳ್ಳಬೇಕು.

ಆರಿಸಿಹೋದ ಪ್ರತಿನಿಧಿಗಳಲ್ಲಿ ಕೆಲವರು ಸರಕಾರವನ್ನು ರಚಿಸುತ್ತಾರೆ. ಇವರ ಗುಂಪಿಗೆ ಮಂತ್ರಿಮಂಡಲ ಎನ್ನಲಾಗುತ್ತದೆ. ಇವರಿಗೆ ಒಬ್ಬ ಮುಖಂಡ



ವಿಧಾನ ಸೌಧ

ಇರುತ್ತಾನೆ. ಈ ಗುಂಪನ್ನು ಕಾರ್ಯಾಂಗ ಎನ್ನಲಾಗುತ್ತದೆ. ಶಾಸನಾಂಗವು ರಚಿಸಿದ ಕಾನೂನುಗಳನ್ನು ಮತ್ತು ನಿಯಮಾವಳಿಗಳನ್ನು ಕಾರ್ಯಾಂಗವು ಜಾರಿಗೆ ತರುತ್ತದೆ. ಅಂದರೆ, ನಮ್ಮ ಪ್ರತಿನಿಧಿಗಳೇ ಕಾನೂನುಗಳನ್ನು ಜಾರಿಗೆ ತರುವುದು. ಜಾರಿಯಲ್ಲಿರುವ ಕಾನೂನುಗಳನ್ನು ನಾವು ಪಾಲಿಸಬೇಕು; ರೂಪಿಸಿದ ಸೂತ್ರಗಳ ಪ್ರಕಾರ ನಡೆದುಕೊಳ್ಳಬೇಕು. ಇದು ನಮ್ಮ ಕರ್ತವ್ಯ ಮತ್ತು ಹೊಣೆ.

ಕಾನೂನು ಮತ್ತು ನಿಯಮಗಳನ್ನು ಜಾರಿಗೆ ತರುವುದಕ್ಕಾಗಿ ಸರಕಾರದಲ್ಲಿ ವಿವಿಧ ರೀತಿಯ ಇಲಾಖೆಗಳಿರುತ್ತವೆ. ಈ ಇಲಾಖೆಗಳನ್ನೂ ಹಂತಹಂತವಾಗಿ ವಿಭಾಗಿಸಿ, ರಚಿಸಲಾಗಿರುತ್ತದೆ. ಈ ಇಲಾಖೆಗಳಲ್ಲಿ ಕೆಲಸ ಮಾಡಲಿಕ್ಕಾಗಿ ಲಕ್ಷಗಟ್ಟಲೆ ಜನರು ಬೇಕಾಗುತ್ತಾರೆ. ಸರಕಾರವು ನಿಯಮಗಳಿಗೆ ಅನುಗುಣವಾಗಿ ಜನರನ್ನು ನಿಶ್ಚಿತವಾದ ಹುದ್ದೆಗಳಿಗೆ ನೇಮಿಸಿಕೊಳ್ಳುವುದು.

ಸರಕಾರದ ಕೆಲಸದಲ್ಲಿ ನಿರತರಾಗಿರುವವರೂ ಪ್ರಜೆಗಳೇ. ಅಂದರೆ, ಅವರೂ ನಮ್ಮ ಪ್ರತಿನಿಧಿಗಳು. ಸರಕಾರಿ ನೌಕರರಿಗೆ ಕೆಲವು ಸವಲತ್ತುಗಳಿರುತ್ತವೆ ಹಕ್ಕು-ಅಧಿಕಾರಗಳಿರುತ್ತವೆ. ಅದರಂತೆಯೇ ಅವರಿಗೆ ಗುರುತರವಾದ ಕರ್ತವ್ಯ ಮತ್ತು ಹೊಣೆ ಇರುತ್ತವೆ. ತಮ್ಮ ತಮ್ಮ ಕೆಲಸವನ್ನು ಪ್ರಾಮಾಣಿಕವಾಗಿ ಮಾಡಬೇಕಾದದ್ದು ತಮ್ಮ ಪವಿತ್ರ ಕರ್ತವ್ಯ ಎಂದು ನೌಕರರು ತಿಳಿಯತಕ್ಕದ್ದು. ಪ್ರಜೆಗಳ ಸುಖ-ಸಂತೋಷಗಳು ಮತ್ತು ಸಮಾಜದ ಅಭ್ಯುದಯವು ತಮ್ಮ ಗುರಿ ಎಂದು ಅವರು ತಿಳಿಯತಕ್ಕದ್ದು. ಅದರಂತೆಯೇ ಅವರು ಕಾರ್ಯನಿರತರಾಗಿರಬೇಕು. ಅವರು ಕಾರ್ಯ ಮಾಡುವಾಗ ತಾವು ಸರಕಾರದ ನೌಕರರು ಎಂದು ತಿಳಿಯಬೇಕು. ಜೊತೆಗೆ ತಾವು ಪ್ರಜ್ಞಾವಂತ ಪ್ರಜೆಗಳು ಎಂತಲೂ ತಿಳಿದಿರಬೇಕು. ಅಂದರೆ ನಮ್ಮವರೇ ಸರಕಾರದಲ್ಲಿ ಕೆಲಸ ಮಾಡುತ್ತಿರುವುದು ಎಂದು ಇದರಿಂದ ಅರಿವಾಗುತ್ತದೆ.

ಸರಕಾರದ ಕೆಲಸವು ಸುಲಭವಾದದ್ದಲ್ಲ. ಅದರ ನಿರ್ವಹಣೆಯಲ್ಲಿ ಅನೇಕ ತೆಂದರೆಗಳು ಇರುತ್ತವೆ. ಇವುಗಳನ್ನು ನಿಭಾಯಿಸುವಾಗ ಸರಕಾರಿಅಧಿಕಾರಿಗಳು ಮತ್ತು ಇತರ ಸಿಬ್ಬಂದಿಯವರು ನಾನಾ ತುಮುಲಗಳಿಗೆ ಒಳಗಾಗುತ್ತಾರೆ. ಅವರ ತೊಂದರೆಗಳನ್ನು ನಾವು ಅರಿತುಕೊಳ್ಳಬೇಕು. ಅವರ ಕಾರ್ಯ ನಿರ್ವಹಣೆಯಲ್ಲಿ ನಾವು ಸಹಕಾರಿಸಬೇಕು. ಪ್ರಜೆಗಳು ಸಹಕರಿಸಿದರೆ ಸರಕಾರದ ನೌಕರರು ಲವಲವಿಕೆಯಿಂದ ಮತ್ತು ಮುತುವರ್ಜಿಯಿಂದ ಕೆಲಸ ಮಾಡಲು ಸಾಧ್ಯವಾಗುತ್ತದೆ.

ಪ್ರಜೆಗಳಾದ ನಾವು ಸರಕಾರದ ನೌಕರರಾಗಿ ಸರಕಾರದಲ್ಲಿ ಪಾಲ್ಗೊಳ್ಳುತ್ತೇವೆ. ಸರಕಾರದ ನೌಕರರ ಜೊತೆಗೆ ಸಹಕರಿಸುವುದರ ಮೂಲಕವೂ ಸರಕಾರದಲ್ಲಿ ಪಾಲ್ಗೊಳ್ಳುತ್ತೇವೆ.

ಸರಕಾರವು ಅನೇಕ ವೇಳೆ ಹಾದಿ ತಪ್ಪುವುದುಂಟು. ಪ್ರಜೆಗಳಿಗೆ ಅನಾನುಕೂಲವಾಗುವ ರೀತಿಯಲ್ಲಿ ನಡೆದುಕೊಳ್ಳುವುದುಂಟು. ಕಾನೂನುಗಳನ್ನು ಸರಿಯಾಗಿ ಜಾರಿಗೆ ತರದೇ ಹೋಗಬಹುದು. ನಿಯಮಾವಳಿಗಳನ್ನು ಉಲ್ಲಂಘಿಸಬಹುದು. ಪ್ರಜೆಗಳ ಸಂಕಷ್ಟಗಳಿಗೆ ಗಮನಕೊಡದೇ ಹೋಗಬಹುದು. ಇಂತಹ ಅನೇಕ ಪ್ರಸಂಗಗಳಲ್ಲಿ

ಪ್ರಜೆಗಳಾದ ನಾವು ಸುಮ್ಮನೇ ಇರಬಾರದು. ಸರಕಾರದ ಗಮನ ಸೆಳೆಯುವ ಹಾಗೆ ನಾವು ಕಾರ್ಯ ಕೈಗೊಳ್ಳಬೇಕು. ನಮ್ಮ ಅಹವಾಲುಗಳನ್ನು ಪರಿಶೀಲಿಸಲು ಮತ್ತು ಪರಿಹಾರಗಳನ್ನು ನೀಡಲು ನ್ಯಾಯಾಂಗವಿದೆ. ಆ ನ್ಯಾಯಾಂಗಕ್ಕೆ ನಾವು ಮೊರೆ ಹೋಗಬೇಕು. ಜನರು ತಮ್ಮ ತಮ್ಮೊಳಗೆ ಇರುವ ನ್ಯಾಯವನ್ನು ಬಗೆಹರಿಸಲು ನ್ಯಾಯಾಲಯಗಳಿಗೆ ಹೋಗುತ್ತಾರೆ. ಅದರಂತೆಯೇ ನಾವು ಸರಕಾರದ ವಿರುದ್ಧವೂ ನ್ಯಾಯಾಲಯಗಳಿಗೆ ದೂರು ತೆಗೆದುಕೊಂಡು ಹೋಗಬೇಕು.

ನ್ಯಾಯಾಲಯಗಳಲ್ಲಿ ಇರುವ ನ್ಯಾಯಾಧೀಶರು ಮತ್ತು ನ್ಯಾಯಾಲಯಗಳ ಆಡಳಿತದಲ್ಲಿರುವ ಅಧಿಕಾರಿಗಳು ಮತ್ತು ಇತರ ನೌಕರರು ನಮ್ಮವರೇ. ನಮ್ಮಲ್ಲಿ ಪರಿಣತರಾದವರನ್ನು ಆ ಕೆಲಸಗಳಿಗೆ ನೇಮಿಸಲಾಗಿರುತ್ತದೆ. ಆದುದರಿಂದ ನ್ಯಾಯಾಲಯಗಳಲ್ಲಿ ಇರುವವರೂ ಪ್ರಜೆಗಳೇ. ಅವರೂ ತುಂಬಾ ಹೊಣೆಗಾರಿಕೆಯಿಂದ ಕಾರ್ಯ ನಿರ್ವಹಿಸಬೇಕಾಗುತ್ತದೆ. ಅವರಿಗೆ ಬೇಕಾದ ನೆರವನ್ನು ಮತ್ತು ಸಹಕಾರವನ್ನು ಪ್ರಜೆಗಳಾದ ನಾವು ನೀಡಬೇಕಾಗುತ್ತದೆ.

ನ್ಯಾಯಾಲಯಗಳಲ್ಲೂ ಅನ್ಯಾಯಗಳಾಗುವ ಸಂಭವ ಇರುತ್ತದೆ. ಅಂಥ ಸಂದರ್ಭದಲ್ಲೂ ನಾವು ಎಚ್ಚರದಿಂದ ನಡೆದುಕೊಳ್ಳಬೇಕಾಗುತ್ತದೆ. ಜನಜಾಗೃತಿಯನ್ನು ಉಂಟುಮಾಡುವ ಕಾರ್ಯಕ್ರಮಗಳನ್ನು ಜನರೇ ಕೈಗೊಳ್ಳಬೇಕು.

ಸರಕಾರ ಎಂದರೆ ಜನರಿಂದ ತೀರಾ ಬೇರೆಯಾದ ಒಂದು ಸಂಸ್ಥೆ ಎಂದು ನಾವು ತಿಳಿಯಕೂಡದು. ಸಮಾಜದ ಒಂದು ಭಾಗವೇ ಸರಕಾರ. ಸರಕಾರವು ಇರುವುದು ಸಮಾಜವನ್ನು ಸರಿಯಾಗಿ ನೋಡಿಕೊಳ್ಳಲು. ಪ್ರಜೆಗಳೇ ಸರಕಾರವನ್ನು ನಡೆಸುತ್ತಿರುವುದರಿಂದ ಪ್ರಜೆಗಳಾದ ನಾವೇ ಸರಕಾರ: ಮತ್ತು ಅದು ನಮ್ಮದೆಂದು ತಿಳಿಯತಕ್ಕದ್ದು. ಸರಕಾರದಲ್ಲಿರುವ ಲೋಪ-ದೋಷಗಳನ್ನು ಸರಿಪಡಿಸುವುದರಲ್ಲಿ ನಾವು ನಿರತರಾಗಿರಬೇಕು. ಸರಿಯಾದ ಪ್ರತಿನಿಧಿಗಳನ್ನು ಆರಿಸುವಲ್ಲಿ ನಾವು ಜಾಗ್ರತೆ ಯಿಂದಿರಬೇಕು; ಸರಕಾರವನ್ನು ನಡೆಸಲು ಸಮರ್ಥರಾದ ಸಿಬ್ಬಂದಿಯನ್ನು ಸಿದ್ಧಗೊಳಿಸಿ ಕಳಿಸುವಲ್ಲಿ ಆಸಕ್ತಿಯನ್ನು ತಳೆಯಬೇಕು; ಸರಕಾರವು ಒದಗಿಸುವ ಸಕಲ

ಸೌಲಭ್ಯಗಳನ್ನು ಸದುಪಯೋಗಪಡಿಸಿಕೊಳ್ಳಲು ನಾವು ಮುಂದಾಗಬೇಕು; ಸರಕಾರಕ್ಕೆ ಬೇಕಾದ ಸಹಕಾರ ಹಸ್ತವನ್ನು ನಾವು ನೀಡಬೇಕು; ಸರಕಾರವು ತಪ್ಪು ಹೆಜ್ಜೆ ಇಟ್ಟರೆ ಅದನ್ನು ಸರಿಪಡಿಸಲು ನಾವು ಹೋರಾಡುವ ಸಾಮರ್ಥ್ಯವನ್ನು ಪಡೆಯಬೇಕು. ಸರಕಾರವು ನಮ್ಮದೇ ಆಗಿರುವುದರಿಂದ ಅದು ಸರಿಯಾಗಿ ಕಾರ್ಯ ನಿರ್ವಹಿಸುವಂತೆ ನಾವು ನೋಡಿಕೊಳ್ಳಬೇಕು.

''ಯಥಾ ರಾಜಾ ತಥಾ ಪ್ರಜಾ'' ಎಂದು ಒಂದು ಮಾತು ಇದೆ. ಆದರೆ ''ಯಥಾ ಪ್ರಜಾ ತಥಾ ಸರಕಾರ'' ಎಂಬುದು ಸರಿಯಾದ ಮಾತು. ಈ ಮಾತು ಸಾರ್ಥಕವಾಗಬೇಕಾದರೆ ಪ್ರಜೆಗಳಾದ ನಾವು ಸರಕಾರದ ಜೊತೆಜೊತೆಗೇ ಕಾರ್ಯನಿರತವಾಗಿರಬೇಕು. ಸರಕಾರವು ಒಂದು ಆಯುಧವಿದ್ದಂತೆ. ಆಯುಧವನ್ನು ಸರಿಯಾಗಿ ಇರಿಸಿಕೊಳ್ಳಬೇಕು ಮತ್ತು ಸರಿಯಾಗಿ ಉಪಯೋಗಿಸಿಕೊಳ್ಳಬೇಕು. ಇದರಲ್ಲಿ ಪ್ರಜೆಗಳಾದ ನಮ್ಮ ಹೊಣೆಯು ತುಂಬಾ ಗುರುತರವಾದದ್ದು ಮತ್ತು ತುಂಬಾ ಮಹತ್ವದ್ದು.

ಕನ್ನಡ ವಿಶ್ವವಿದ್ಯಾ ಟ್ಟದವರೆಗೆ ಉತ್ತಮ
ಹಾಗೂ ಉಪಯು ಠ್ಯಪುಸ್ತಕ ರಚನಾ
ವಿಭಾಗ'ವನ್ನು ತೆ ಠ್ಯಪುಸ್ತಕ ರಚನೆ
ಮಾಡಬೇಕೆಂದು ನವಸಾಕ್ಷರರಿಗಾಗಿ
ಪುಸ್ತಕ ಬರೆಸುವ ಕ್ಕೆ ವಹಿಸಿಕೊಟ್ಟರು.
ವಿಶ್ವವಿದ್ಯಾಲಯವ ಖ್ಯಾತ ಲೇಖಕರನ್ನು,
ಭಾಷಾತಜ್ಞರನ್ನು, ರೆಲ್ಲರ ಅಭಿಪ್ರಾಯ,
ಸಲಹೆ, ಸಹಕಾರ ಮುದ್ರಣ ವಿನ್ಯಾಸ,
ಚಿತ್ರಗಳ ಮಹತ್ವ ನೇಕ ಸಲ ಚರ್ಚಿಸಿ
ಯೋಜನೆಯನ್ನು

ನವಸಾಕ್ಷರರಿಗಾಗಿ ೀ ಪ್ರಕಟವಾಗಿರುವ
ಪುಸ್ತಕಗಳನ್ನೆಲ್ಲ ಭಾಷಾತಜ್ಞರಿಂದ
ಪರಿಶೀಲಿಸಲಾಯಿ ಸಿಕೊಂಡು ಅವರಿಗೆ
ಕಮ್ಮಟಗಳನ್ನು ಂತ ಆಯ್ದ ಜಿಲ್ಲೆ,
ತಾಲೂಕುಗಳಿಗೆ ರುವವರಿಂದ ಅದರ
ಗುಣದೋಷಗ ಲ್ಲ ವಿಶ್ವವಿದ್ಯಾಲಯದ
ಗಣಕಯಂತ್ರದ ಸಹಾಯಕರು ನೀಡಿದ್ದ
ಮಾಹಿತಿಗಳನ್ನೆ ಗುಣವಾಗಿ ವಿಷಯದ
ಆದ್ಯತೆಗಳನ್ನು ತ ಲೇಖಕರು ನಮ್ಮ
ವಿಶ್ವವಿದ್ಯಾಲಯದ ಪ್ರಾಧ್ಯಾಪಕರ ಜೊತೆ ಚರ್ಚಿಸಿ ತಮ್ಮ ಹಸ್ತಪ್ರತಿಗಳಿಗೆ ಅಂತಿಮ ರೂಪ ಕೊಟ್ಟರು. ಕಲಾವಿದರು ವಿಷಯಗಳಿಗೊಪ್ಪುವ ಚಿತ್ರಗಳನ್ನು ಬರೆದುಕೊಟ್ಟರು. ಹೀಗೆ ಸಿದ್ಧಗೊಂಡ ಹಸ್ತಪ್ರತಿಗಳನ್ನು ನವಸಾಕ್ಷರರ ಬಳಿ ಕೊಂಡೊಯ್ದು ಅವರ ಮುಂದೆ ಪಠಿಸಿ ನಂತರ ಅವರ ಅಭಿಪ್ರಾಯ, ಪ್ರತಿಕ್ರಿಯೆಗಳನ್ನು ಅಳವಡಿಸಿ ಹಸ್ತಪ್ರತಿಯನ್ನು ಅಂತಿಮಗೊಳಿಸಲಾಯಿತು.

---

ನಮ್ಮ ಬಹುಸಂಖ್ಯಾತ ಸಮುದಾಯ ಅನಕ್ಷರಸ್ಥರೇ ಹೊರತು ಅವಿದ್ಯಾವಂತರಲ್ಲ. ನೃಪತುಂಗ ಹೇಳುವಂತೆ ಅವರು "ಚದುರರ್ ನಿಜದಿಂ ಕುರಿತೋದದೆಯುಂ ಕಾವ್ಯ ಪ್ರಯೋಗ ಪರಿಣತ ಮತಿಗಳ್". ಅನುಭವದಲ್ಲಿ, ವಿವೇಕದಲ್ಲಿ, ವ್ಯವಹಾರದಲ್ಲಿ, ತಿಳುವಳಿಕೆಯಲ್ಲಿ ಆ ಜನ ಚದುರರು. ಹೀಗೆಂದು ಅವರನ್ನು ಅಕ್ಷರಧಲಿತರನ್ನಾಗಿಯೂ ಉಳಿಸುವಂತಿಲ್ಲ. ಅವರಲ್ಲಿ ಅಕ್ಷರ ಕಲಿಯುವ ಸಾಮರ್ಥ್ಯವಿದೆ. ಕಲಿಸುವ ಹೊಣೆ ಸರ್ಕಾರಗಳ, ವಿಶ್ವವಿದ್ಯಾಲಯಗಳ ಮೇಲಿದೆ. ಈ ನಿಟ್ಟಿನಲ್ಲಿ ದೇಶದಾದ್ಯಂತ ಸಾಕ್ಷರತಾ ಆಂದೋಲನ ನಡೆಯುತ್ತಿದೆ. ಆದರೆ ಈ ಅಕ್ಷರ ಸಂಸ್ಕೃತಿಯ ಆಂದೋಲನದಲ್ಲಿ ಕಲಿತವರಿಗೆ ಮತ್ತು ಕಲಿಯುವವರಿಗೆ ಉತ್ತಮ ಗುಣಮಟ್ಟದ ಪುಸ್ತಕಗಳ ಅವಶ್ಯಕತೆ ಇದೆ. ಕಲಿತವರು ಮರೆಯದಂತೆ, ಕಲಿಕೆಯನ್ನು ಮುಂದುವರಿಸುವಂತೆ ನೋಡಿ ಕೊಳ್ಳುವುದು ಎಲ್ಲರ ಕರ್ತವ್ಯ.

ಕನ್ನಡ ವಿಶ್ವವಿದ್ಯಾಲಯವು ನಾಡಿನ ಹಲವು ವಿದ್ವಾಂಸರೊಂದಿಗೆ ಸೇರಿ ನಡೆಸಿದ ಒಂದು ಸಾಮೂಹಿಕ ಪ್ರಯತ್ನದ ಫಲವಾಗಿ ಈ ಪುಸ್ತಕ ರೂಪತಾಳಿದೆ. ನವಸಾಕ್ಷರರು ಈ ಪುಸ್ತಕವನ್ನು ಪ್ರೀತಿಯಿಂದ ಸ್ವೀಕರಿಸುತ್ತಾರೆಂದು ನಂಬಿದ್ದೇವೆ. ಈ ಯೋಜನೆಯ ಯಶಸ್ಸಿಗೆ ಕಾರಣರಾಗಿರುವ ಉನ್ನತ ಸಲಹಾ ಸಮಿತಿ ಹಾಗೂ ಸಂಪಾದಕ ಸಮಿತಿಯ ಸದಸ್ಯರಿಗೆ, ಲೇಖಕರಿಗೆ, ಕಲಾವಿದರಿಗೆ ಹಾಗೂ ಈ ಯೋಜನೆಯಲ್ಲಿ ಪ್ರತ್ಯಕ್ಷವಾಗಿ, ಪರೋಕ್ಷವಾಗಿ ನಮ್ಮೊಡನೆ ಪಾಲ್ಗೊಂಡವರೆಲ್ಲರಿಗೂ ನಮ್ಮ ಹೃತ್ಪೂರ್ವಕವಾದ ವಂದನೆಗಳು. ನಮ್ಮ ವಿಶ್ವವಿದ್ಯಾಲಯದ ಮೇಲೆ ವಿಶ್ವಾಸವಿಟ್ಟು ಇಂತಹ ಒಂದು ಗುರುತರವಾದ ಯೋಜನೆಯನ್ನು ವಹಿಸಿಕೊಟ್ಟ ಲೋಕಶಿಕ್ಷಣ ಇಲಾಖೆಯ ನಿರ್ದೇಶಕರಾದ ಶ್ರೀ ಲೂಕೋಸ್ ವಲ್ಲತ್ತರೈ ಅವರಿಗೆ ನನ್ನ ಕೃತಜ್ಞತೆಗಳು. ಓದುಗರು ಈ ಪುಸ್ತಕದ ಬಗ್ಗೆ ತಮ್ಮ ಅಭಿಪ್ರಾಯಗಳನ್ನು ತಿಳಿಸಿದರೆ ನಮ್ಮ ಪಠ್ಯಪುಸ್ತಕ ರಚನೆಗೆ ಉಪಯೋಗವಾಗುತ್ತದೆ.

**ಚಂದ್ರಶೇಖರ ಕಂಬಾರ**
ಕುಲಪತಿಗಳು

---